श्री

वेदपुरुषो विजयते

ಚತುರ್ವೇದ ಪಂಡಿತಪ್ರವರರಾದ

# ಶ್ರೀಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆ

ಮತ್ತು

## ಸಕಲವೇದಗಳ ಶಾಖೋಪಶಾಖೆಗಳ ಪರಿಚಯ

ಯೋಗೀಶ್ವರಂ ಯಾಜ್ಞವಲ್ಕ್ಯಂ ಸಂಪೂಜ್ಯ ಮುನಯೋಽಬ್ರುವನ್
ವರ್ಣಾಶ್ರಮೇತರಾಣಾಂ ನೋ ಬ್ರೂಹಿ ಧರ್ಮಾನಶೇಷತಃ ||
(ಯಾಜ್ಞವಲ್ಕ್ಯಸ್ಮೃತಿ ೧।೧)

ಲೇಖಕರು ಮತ್ತು ಪ್ರಕಾಶಕರು

ಇತಿಹಾಸ ಸಂಶೋಧಕರಾದ

**ನಾರಾಯಣ ಶ್ರೀನಿವಾಸ ರಾಜಪುರೋಹಿತರು**

ಶ್ರೀಸುರೇಶ್ವರಾಚಾರ್ಯರ ಚರಿತ್ರೆ, ಶ್ರೀಮಧ್ವಾಚಾರ್ಯರ ಚರಿತ್ರೆ
ಕರ್ನಾಟಕದ ಇತಿಹಾಸ, ದಾನಧರ್ಮ ಪದ್ಧತಿ, महाराष्ट्र व कर्नाटक
ಇತ್ಯಾದಿ ಪುಸ್ತಕಗಳ ಕರ್ತೃ.
ಧಾರವಾಡ

ಮೊದಲನೆಯ ಆವೃತ್ತಿ: ೧೦೦೦ ಪ್ರತಿಗಳು

ಶ್ರೀಮಚ್ಚಾಲುಕ್ಯ ವಿಕ್ರಮ ವರ್ಷದ ೮೬೪

ಬೆಲೆ ೧ ರೂಪಾಯಿ

# ಸಮರ್ಪಣ ಪತ್ರಿಕೆ

## मातृदेवो भव ।

ಶ್ರೀಯಾಜ್ಞವಲ್ಕ್ಯ ಮಹಾಮುನಿಗಳ

ಪತ್ನಿಯರಾದ

ಬ್ರಹ್ಮವಾದಿನೀ ಮೈತ್ರೇಯಿ ದೇವಿಯ ಮತ್ತು ಕಾತ್ಯಾಯಿನಿ ದೇವಿಯ

ಸ್ಮಾರಕಾರ್ಥವಾಗಿ

ಶ್ರೀಮತ್ಪೂಜ್ಯ ಪರಮೇಶ್ವರ ದೀಕ್ಷಿತರು ಗುರ್ಲಹೊಸೂರ

ಇವರ ಮಾತೃಭಗಿನಿಯರಾದ

**ಶ್ರೀಮತಿ ಪದ್ಮಾಬಾಯಿಯವರು,**

ಸುಭೇದಾರ, ಬ್ರಹ್ಮಾವರ್ತ

ಇವರಿಗೆ

ಗೌರವ ಪುರಸ್ಸರವಾಗಿ

ಈ ಗ್ರಂಥವನ್ನು

ಸಮರ್ಪಿಸಿದ್ದೇನೆ.

ಗ್ರಂಥಕರ್ತೃ

**ನಾ. ಶ್ರೀ. ರಾಜಪುರೋಹಿತ**

# ಅನುಕ್ರಮಣಿಕೆ

# ಮುನ್ನುಡಿ



ಕರ್ನಾಟಕದ ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಶ್ರೀಮಾನ್ ನಾ. ಶ್ರೀ. ರಾಜಪುರೋಹಿತರು ಈ ಪುಸ್ತಕದಲ್ಲಿ ಶ್ರೀಯಾಜ್ಞವಲ್ಕ್ಯರು ಶುಕ್ಲ, ಕೃಷ್ಣ ಈ ಎರಡೂ ಯಜುರ್ವೇದಗಳ ಶಾಖಾಪ್ರವರ್ತಕ ಋಷಿಗಳಾಗಿದ್ದರೆಂಬುದನ್ನು ಮೀಮಾಂಸಾಪದ್ಧತಿಗನುಗುಣವಾಗಿಯೂ, ತರ್ಕಶುದ್ಧವಾಗಿಯೂ ಹಾಗೂ ಸಪ್ರಮಾಣವಾಗಿಯೂ ಪ್ರಾಚೀನ ಆಧಾರಗಳಿಂದಲೇ ಸುಂದರವಾಗಿ ವಿವೇಚಿಸಿ ಸಿದ್ಧಮಾಡಿದ್ದಾರೆ. ಶ್ರೀಯಾಜ್ಞವಲ್ಕ್ಯರಿಗೆ ಅವರು ಕೊಡಬೇಕಾದ 'ಋಷಿಋಣ' ವನ್ನು ಈ ಸಂಶೋಧನೆಯಿಂದ ತೀರಿಸಿ ಬಿಟ್ಟಿದ್ದಾರೆ ಈ ಮೂಲಕವಾಗಿ ಶ್ರೀ. ರಾಜಪುರೋಹಿತರು ನಮ್ಮೆಲ್ಲರ ಮೇಲೆ ಮಾಡಿರುವ ಉಪಕಾರವನ್ನು ನೆನಿಸುವ ಸಮಯಸಿಕ್ಕಿತೆಂದೇ ನಾನು ಈ ನಾಲ್ಕು ಸಾಲುಗಳನ್ನು ಬರೆಯುತ್ತಿದ್ದೇನೆ.

ನಮ್ಮ ವೈದಿಕ ಅಥವಾ ಉಪನಿಷತ್ ಸಾಂಪ್ರದಾಯವು ಬಲು ಉಜ್ಜ್ವಲವಾದುದು; ಉದಾತ್ತವಾದುದು; ಉದಾರವಾದುದು. ಅದು ಎಲ್ಲ ಮಾನವಜಾತಿಯನ್ನೇ ಉದ್ಧಾರಮಾಡುವಷ್ಟು ಸಾಮರ್ಥ್ಯವುಳ್ಳದ್ದಾಗಿದೆ. ಇಂದು ದಿಕ್ಕೆಟ್ಟು, ಕಂಗೆಟ್ಟು ಬಳಲುತ್ತಿರುವ ಪಾಶ್ಚಾತ್ಯ ಸಂಸ್ಕೃತಿಗೆ ಶಾಂತಿಪಾಠವನ್ನು ಕಲಿಸಿಕೊಡುವ ಬಲವು ಜಗತ್ತಿನ ಉಳಿದ ಯಾವ ಧರ್ಮಗಳಲ್ಲಿಯೂ ಇರದೆ, ಉಪನಿಷದ್ಧರ್ಮದಲ್ಲಿ ಮಾತ್ರ ಇದೆ. ಎಂತೆಯೇ ಕಾಲನ ದವಡೆಯಲ್ಲಿ ಸಿಕ್ಕು, ಉಳಿದೆಲ್ಲ ಧರ್ಮ, ಸಂಸ್ಕೃತಿ

ಗಳು ನುಚ್ಚುನೂರಾಗಿ ಹೋದರೂ ನಮ್ಮ ವೈದಿಕ ಧರ್ಮವು ಐದಾರು ಸಾವಿರ ವರುಷಗಳಿಂದ ಅಚ್ಚಳಿಯದೇ ಉಳಿದಿದೆ. ಆ ಸಾಂಪ್ರದಾಯದ ಅಭ್ಯಾಸಮಾಡಿ, ಅದನ್ನು ಸರಿಯಾಗಿ ತಿಳಿದುಕೊಳ್ಳುವುದು ನಮ್ಮ ಕರ್ತವ್ಯ ವಿದ್ದು, ಆ ಕೆಲಸದಲ್ಲಿ ಈ ಪುಸ್ತಕವು ಒಳ್ಳೇ ಸಹಾಯಕವಾಗಿದೆ. ಯಾಕೆಂದರೆ ಉಪನಿಷತ್‌ಸಾಂಪ್ರದಾಯಪ್ರವರ್ತಕ , ಋಷಿಗಳಲ್ಲಿ ಶ್ರೀಮದ್ಯಾಜ್ಞವಲ್ಕ್ಯರ ಸ್ಥಾನವು ಅತಿ ಶ್ರೇಷ್ಠವಾಗಿದೆ. ಅವರು ಎಲ್ಲ ರೀತಿಯಿಂದಲೂ ಆದರ್ಶಪುರುಷರು. ವರ್ಣಾಶ್ರಮ ಸಂಸ್ಥೆಯನ್ನು ಸಂಪೂರ್ಣವಾಗಿ ಆಚರಿಸಿದವರು. ಪರಮಾರ್ಥ ಪ್ರಧಾನವಾದ ಸಾಂಸಾರಿಕರು. ಒಣ ವೇದಾಂತದ ಮಬ್ಬಿಗೆ ಬಿದ್ದು, ಸಂಸಾರವನ್ನು ಕೆಡಿಸಿಕೊಂಡವರಲ್ಲ. ಅಥವಾ ಆಸಕ್ತಿಯಿಂದ ಸಂಸಾರದ ಮಬ್ಬಿಗೆ ಬಿದ್ದು, ತಮ್ಮ ಪರಮಾರ್ಥವನ್ನೂ ಕಳಿದುಕೊಂಡವರಲ್ಲ. ಸಂಸಾರಾಸಕ್ತಳಾದ ಕಾತ್ಯಾಯನಿಯನ್ನೂ ಸಂತೋಷಪಡಿಸಿದವರು. ಪರಮಾರ್ಥಪ್ರಧಾನಳಾದ ಮೈತ್ರೇಯಿಯನ್ನೂ ಆನಂದಗೊಳಿಸಿದವರು. ಯಜ್ಞಕಾಂಡದಲ್ಲಿ ಅತ್ಯಂತ ನಿಷ್ಣಾತರು. ಚತುರ್ವೇದ ಪಂಡಿತರು. ಯಜುರ್ವೇದ ಪ್ರಸಾರಕರು. ಬ್ರಹ್ಮಜ್ಞಾನದಲ್ಲಿ ಪಾರಂಗತರು. ಬ್ರಹ್ಮನಿಷ್ಠರು. ಅದ್ವೈತಮತಪ್ರತಿಷ್ಠಾಪಕರು. ಜನಕರಾಜನ ಸಭೆಯಲ್ಲಿ ಅತುಲವಾದ ಆತ್ಮವಿಶ್ವಾಸ, ಬುದ್ಧಿಕೌಶಲ್ಯ, ವಾದ ಪಾಟವ, ಮತ್ತು ಶಾಸ್ತ್ರಪರಿಚಯಗಳನ್ನು ತೋರಿಸಿದವರು. ಎಲ್ಲರನ್ನೂ ತಮ್ಮ ಅಮೋಘವಾದ ವಿಷಯಪ್ರತಿಪಾದನೆಯಿಂದ ಬೆರಗುಗೊಳಿಸಿದವರು. ಮೈತ್ರೇಯೀ-ಯಾಜ್ಞವಲ್ಕ್ಯರ ಜೋಡಿಯಿಂದ ಆದರ್ಶದಾಂಪತ್ಯವು ಪ್ರಕಟವಾದರೆ, ಯಾಜ್ಞವಲ್ಕ್ಯ-ಜನಕರ ಜೋಡಿಯಿಂದ ಆದರ್ಶ ಗುರು-ಶಿಷ್ಯಸಂಬಂಧವು ಗೊತ್ತಾಗುವಂತಿದೆ. ಯಾಜ್ಞವಲ್ಕ್ಯರ ಬುದ್ಧಿವೈಭವಕ್ಕೆ ಮರುಳಾದ ಜನಕ ಮಹಾರಾಜನು ತನ್ನ ಸಂಪತ್ತನ್ನೆಲ್ಲ ಅವರಿಗೆ ಕೊಡಲೊಪ್ಪಿದಾಗ, ಶಿಷ್ಯನಿಗೆ ಜ್ಞಾನೋದಯವಾಗುವ ಪೂರ್ವದಲ್ಲಿಯೇ ಅವನ್ನು ಗುರುವು ಸ್ವೀಕರಿಸಲಾಗದೆಂದು ಅವರು ನಿರ್ಮೋಹದಿಂದ ಹೇಳಿದವರು. ಮತ್ತು ಶಿಷ್ಯನಾದ

ಜನಕ ಮಹಾರಾಜನಿಗ್ಗಿಲ್ಲಿಯೇ ನಿರ್ಭಯಸ್ಥಿತಿಯನ್ನು ಪ್ರಾಪ್ತಮಾಡಿ ಕೊಟ್ಟವರು. ಇದಲ್ಲದೆ ಅವರು ತಮ್ಮ ವೈದಿಕ ಸಮಾಜದವರ ಉದ್ಧಾರಕ್ಕಾಗಿ ಸ್ಮೃತಿಗ್ರಂಥವನ್ನೊಂದನ್ನು ರಚಿಸಿದವರು. ಅವರ ಹೆಸರಿನಿಂದಲೇ ಪ್ರಸಿದ್ಧವಾದ ಈ ಸ್ಮೃತಿಯು ಹಿಂದೂಧರ್ಮಶಾಸ್ತ್ರದಲ್ಲಿ ಇಂದಿಗೂ ಅತ್ಯಂತ ಪ್ರಮಾಣಭೂತವಾದ ಗ್ರಂಥವಾಗಿದೆಯೆಂದಿಷ್ಟು ಹೇಳಿದರೆ ಸಾಕು; ಅದರಿಂದ ಅವರ ಯೋಗ್ಯತೆಯು ತಿಳಿಯುವಂತಿದೆ. ಮೇಲಾಗಿ ಅಧ್ಯಾತ್ಮವಿದ್ಯಾಪ್ರಾಪ್ತಿಗಾಗಿ ಯೋಗಶಾಸ್ತ್ರವನ್ನೂ ಅವರು ಬರೆದವರು. ಕೊನೆಗೆ ಎಲ್ಲವನ್ನೂ ತ್ಯಜಿಸಿ, ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಬ್ರಹ್ಮಪದವಿಯಲ್ಲಿ ಸೇರಿದವರು.

ಈ ದಿವ್ಯಪುರುಷರ ಪಾವನಕರವಾದ ಜೀವನಚರಿತ್ರೆಯು ಈ ಮೊದಲೇ ಕನ್ನಡದಲ್ಲಿ ಪ್ರಕಟವಾಗಬೇಕಿತ್ತು. ಆದರೆ ಕನ್ನಡಿಗರ ಆಲಸ್ಯದಿಂದ ಆ ಕೆಲಸವು ಹಾಗೆಯೇ ಉಳಿದಿತ್ತು. ಕನ್ನಡಿಗರೆಲ್ಲರಿಗೂ ತಮ್ಮ ಅಮೌಲ್ಯವಾದ ಸಂಶೋಧನೆಗಳಿಂದ ಚಿರಪರಿಚಿತರಾದ ಮತ್ತು ನುರಿತ ಲೇಖಕರಾದ ಶ್ರೀ. ರಾಜಪುರೋಹಿತ ನಾರಾಯಣಾಚಾರ್ಯರು ಈ ಕೆಲಸಕ್ಕಾಗಿ ಮುಂದೆ ಬಂದುದು ನಮ್ಮ ಸುದೈವವೇ ಸರಿ. ನಮ್ಮಲ್ಲಿ ಅನೇಕ ಐತಿಹಾಸಿಕ ಪುರುಷರ ಚರಿತ್ರೆಯು ಸುತ್ತುಮುತ್ತು ಸುಳ್ಳುಕಥೆಗಳು ಮುಲಿತು ನಿಂತುಕೊಂಡಿವೆ. ಆಯಾ ಮಹಾಪುರುಷರ ಹೆಚ್ಚಳವನ್ನು ಬೆಳಿಸಬೇಕೆಂಬ ಸದ್ಧೇತುವಿನಿಂದಲೇ ಅವು ಪ್ರೇರಿತವಾಗಿರಬಹುದಾದರೂ ಅವುಗಳ ಉದ್ದೇಶವು ಮಾತ್ರ ಕೆಲವುಸಾರೆಯಂತೂ ತೀರ ವಿಪರೀತ ವಾಗಿಬಿಟ್ಟಿರುವುದು, ಕಂಡುಬರುತ್ತದೆ. ಇಂತಹ ಸುಳ್ಳುಕಥೆಗಳ ಜಾಲ ವನ್ನೆಲ್ಲ ಹರಿದೊಗೆದು ಮಹಾಪುರುಷರ ಜೀವನವನ್ನಷ್ಟೇ ಆರಿಸಿ, ತೆಗೆಯುವುದು, ಬಲು ಕಠಿಣವಾದ ಮಾತು. ಇದಕ್ಕೆ ಹಿರಿದಾದ ಧೈರ್ಯವು ಬೇಕು. ಈ ಕಥೆಗಳೆಲ್ಲ ಇದ್ದಕ್ಕಿದ್ದಂತೆ ಸತ್ಯವಾಗಿರುವುವೆಂದೂ ಅವುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುವುದೇ ಪಾಪಕರವೆಂದೂ ತಿಳಿಯುವ ಪುಕ್ಕಜನರು ಈ ಕೆಲಸಕ್ಕೆ ತೀರ ಅಯೋಗ್ಯರು. ಆದರೆ ಶ್ರೀ. ರಾಜ

ಪುರೋಹಿತರ ಈ ವಿಷಯಕವಾದ ಸಾಹಸವು ಪ್ರಸಿದ್ಧವೇ ಆಗಿದೆ ಅವರು ಯಾರ ಹಂಗನ್ನೂ ಹಿಡಿಯದೆ ನಿರ್ದಾಕ್ಷಿಣ್ಯವಾಗಿ ಸತ್ಯವನ್ನು ಪರೀಕ್ಷಿಸಿ ಹೇಳುವವರು. ಐತಿಹಾಸಿಕ ಸಂಗತಿಗಳನ್ನು ಮೀಮಾಂಸಾ ಪದ್ಧತಿಯ ಝರಡಿಗೆ ಹಾಕಿ ತೆಗೆಯುವುದು ಅವರ ಶೈಲಿಯ ವೈಶಿಷ್ಟ್ಯ. ಹಳೆಯ ಮಾತುಗಳನ್ನು ಹೊಸಶೈಲಿ, ಹೊಸಪದ್ಧತಿಗಳಲ್ಲಿ ಹೇಳುವ ಅವರ ರೀತಿಯೇ ನಿರುಪಮವಾಗಿದೆ. ಈ ಮಾತಿಗೆ ಅವರು ಬರೆದ ಈ ಚರಿತ್ರೆಯಲ್ಲಿ ಮೊದಲನೆಯ ಅಧ್ಯಾಯವೇ ಸಾಕ್ಷಿಯಾಗಿದೆ. ಅದು ಅವರ ಬುದ್ಧಿಕೌಶಲ್ಯವನ್ನೂ ಸಂಶೊಧನಾಪಾಟವವನ್ನೂ ಚೆನ್ನಾಗಿಯೇ ತೋರಿಸುವಂತಿವೆ. ಯಾಜ್ಞವಲ್ಕ್ಯರ ವಿಷಯಕವಾಗಿ ರೂಢವಾಗಿದ್ದ ಕಥೆಯನ್ನು, ಶಾಸ್ತ್ರಶುದ್ಧವಾದ ಮೀಮಾಂಸಾ ಪದ್ಧತಿಯ ನಿಯಮ ಗಳಿಗನುಸಾರವಾಗಿಯೇ ಪರೀಕ್ಷಿಸಿ, ಶ್ರೀಮಚ್ಛಂಕರಾಚಾರ್ಯ, ಶ್ರೀಸಾಯಣಾಚಾರ್ಯ ಮೊದಲಾದವರ ಆಧಾರದಿಂದಲೇ ಅದಕ್ಕೆ ಸಮಂ ಜಸವಾಗಿ ಅರ್ಥ ಹಚ್ಚಿದ್ದಾರೆ. ಅವರ ಸಂಶೋಧನೆಯಿಂದ ಶ್ರೀಯಾಜ್ಞ ವಲ್ಕ್ಯರ ಚರಿತ್ರದ ಮೇಲೆ ಹೊಸ ಬೆಳಕು ಬಿದ್ದಂತಾಗಿದೆ. ಆ ಕಥೆಯ ಜಾಳಿಗೆಯೊಳಗಿಂದ ಅವರ ದಿವ್ಯಚರಿತ್ರೆಯು ಹೆಚ್ಚು ಉಜ್ಜ್ವಲವಾಗಿ ಎದ್ದು ಕಾಣುವಂತಾಗಿದೆ. ಶ್ರೀ. ರಾಜಪುರೋಹಿತರ ಈ ಶೋಧದಿಂದ ಅವರಿಗೆ ನಾವೆಲ್ಲರೂ ಕೃತಜ್ಞರಾಗಬೇಕಾಗಿದೆ. ಅಷ್ಟು ಮಹತ್ತ್ವವಿದ್ದಿದೆ, ಅವರ ಈ ಶೋಧವು !

ಅವರ ಕುಶಲವಾದ ಲೆಕ್ಕಣಿಕೆಯಿಂದ ಇವೇ ಮಾದರಿಯ ಅನೇಕ ಸಂಶೋಧನಾತ್ಮಕ ಗ್ರಂಥಗಳು ಹೊರಬೀಳಲೆಂದು ಪ್ರಾರ್ಥಿಸುತ್ತೇನೆ.

| | | |
|---|---|---|
| ಬೈಲಹೊಂಗಲ<br>೨೮—೧೦—೧೯೩೭ | } | ಎಸ್. ಆರ್. ಕುಲಕರ್ಣಿ<br>ಎಮ್. ಎ., ಎಲ್‌ಎಲ್. ಬಿ. |

———

॥ श्री ॥

ॐ नमो वेदपुरुषाय ॥

# ಚತುರ್ವೇದ ಪಂಡಿತವರ್ಯರಾದ ಶ್ರೀಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆ

## ೧ನೆಯ ಅಧ್ಯಾಯ

## ಶ್ರೀಯಾಜ್ಞವಲ್ಕ್ಯರ ಅವತಾರ ಕಾರ್ಯಗೌರವ ಮತ್ತು ಅವರ ಅವತಾರ ಕಾರ್ಯಮೀಮಾಂಸೆ

ಯೋಗೀಶ್ವರಂ ಯಾಜ್ಞವಲ್ಕ್ಯಂ ಸಂಪೂಜ್ಯ ಮುನಯೋಽ-
ಬ್ರುವನ್ ।
ವರ್ಣಾಶ್ರಮೇತರೇಷಾಂ ^೧^ ನೋ ಬ್ರೂಹಿ ಧರ್ಮಾನ-
ಶೇಷತಃ ॥ ೧-೧ ॥
( ಶ್ರೀಯಾಜ್ಞವಲ್ಕ್ಯಸ್ಮೃತಿಃ )

ಶ್ರೀ ಯಾಜ್ಞವಲ್ಕ್ಯರ ಚರಿತ್ರೆಯೆಂದರೆ ಸಕಲ ವೇದಗಳ ಇತಿ-
ಹಾಸವಾಗಿದೆ. ಆದುದರಿಂದ ಶ್ರೀಯಾಜ್ಞವಲ್ಕ್ಯಮಹಾಮುನಿಗಳು

---

( ೧ ) ಅನಂತಶಯನ ಗ್ರಂಥಾವಲಿಯಲ್ಲಿ ( ಗ್ರಂಥಾಂಕ ೭೪) ವೇದಮೂರ್ತಿ
ಗಳಾದ ಮಹಾಮಹೋಪಾಧ್ಯಾಯ ತ. ಗಣಪತಿಶಾಸ್ತ್ರಿಗಳವರು ಸಂಶೋಧಿಸಿ,

ಅವತರಿಸುವುದಕ್ಕಿಂತ ಪೂರ್ವದಲ್ಲಿ ವೇದಗಳ ವಸ್ತುಸ್ಥಿತಿಯು ಹೇಗಿತ್ತೆಂಬುವನ್ನು ಮೊದಲು ವಿವರಿಸಿ ಹೇಳಿಬಿಟ್ಟರೆ, ಮುಂದೆ ಹೇಳುವ ಕೃಷ್ಣ ಯಜುರ್ವೇದ, ಶುಕ್ಲಯಜುರ್ವೇದಗಳ ಶಾಖಾಪ್ರವರ್ತಕ ಋಷಿಗಳಾದ ಹಾಗೂ ಚತುರ್ವೇದ ಪಂಡಿತಪ್ರವರರಾದ ಶ್ರೀ ಯಾಜ್ಞವಲ್ಕ್ಯ ಮಹರ್ಷಿಗಳ ದಿವ್ಯ ಚರಿತ್ರೆಯು ವಾಚಕರಿಗೆ ಸುಲಭವಾಗಿ ತಿಳಿಯುವುದು. ವೇದಗಳ ಇತಿಹಾಸವನ್ನು ಹೇಳುವುದಕ್ಕಿಂತ ಮೊದಲು **"ವೇದ"** ಎಂದರೆ ಏನೆಂಬುದನ್ನು ಸ್ಪಷ್ಟೀಕರಣಮಾಡಿ, ಆ ವೇದಗಳ ಇತಿಹಾಸದ ಮೇಲೆ ಸ್ವಚ್ಛವಾದ ಪ್ರಕಾಶವನ್ನು ಬೀರುವಾ.

**ಮನ್ತ್ರಬ್ರಾಹ್ಮಣಯೋರ್ವೇದ ನಾಮಧೇಯಮ್ ॥ ೩೩ ॥**

( ಆಪಸ್ತಂಬೀಯ ಪರಿಭಾಷಾ ಸೂತ್ರಮ್ )

ಎಂದರೆ ಮನ್ತ್ರ ಮತ್ತು ಬ್ರಾಹ್ಮಣ ಇವೆರಡಕ್ಕೂ " **ವೇದ** " ಎಂದು ಹೆಸರು, ಮಂತ್ರಗಳ ಸಮುದಾಯವನ್ನು **"ಸಂಹಿತೆ"** ಎಂದು ಸಂಬೋಧಿಸುತ್ತಾರೆ. ಸಂಹಿತೆಯಲ್ಲಿಯ ಪ್ರತಿಯೊಂದು ಮನ್ತ್ರವನ್ನು, ಯಜ್ಞಯಾಗಾದಿ ಕರ್ಮಕಾಂಡದಲ್ಲಿ-ಯಾವಕಾಲದಲ್ಲಿ, ಯಾವಸ್ಥಳದಲ್ಲಿ, ಹೇಗೆ ವಿನಿಯೋಗ ಮಾಡಬೇಕೆಂಬುದನ್ನು ಸ್ಪಷ್ಟೀಕರಣ ಮಾಡುವುದೇ ಬ್ರಾಹ್ಮಣ ಗ್ರಂಥದ ಮುಖ್ಯವಾದ ಉದ್ದೇಶವಾಗಿದೆ. ಅರ್ಥಾತ್ ಸಂಹಿತೆಯ ಪ್ರವಚನಕ್ಕೆ " **ಬ್ರಾಹ್ಮಣ** " ಎಂದು ಹೆಸರು. ಸಂಹಿತೆಯು ಪದ್ಯಮಯವಾಗಿದೆ; (ಎಂದರೆ ಮನ್ತ್ರಗಳು ಪದ್ಯಮಯವಾಗಿವೆ). ಬ್ರಾಹ್ಮಣವು ಗದ್ಯಮಯವಾಗಿದೆ.

ಅತ್ಯಂತ ಪ್ರಾಚೀನಕಾಲದಲ್ಲಿ ಎಂದರೆ ( ಪೌರಾಣಿಕ ಭಾಷೆಯಲ್ಲಿ ಹೇಳುವುದಾದರೆ, ) ಕೃತ, ತ್ರೇತಾ ಯುಗಗಳಲ್ಲಿ (೧) ಋಗ್ವೇದ (೨) ಯಜುರ್ವೇದ (೩) ಸಾಮವೇದ ಇವು ಮೂರೇ ವೇದಗಳಿದ್ದವು. ಇವು

---

ಪ್ರಸಿದ್ಧಮಾಡಿದ ಜಗದ್ಗುರು ಶ್ರೀಸುರೇಶ್ವರಾಚಾರ್ಯಪ್ರಣೀತ ಬಾಲಕ್ರೀಡಾಖ್ಯ ಟೀಕಾಸಮೇತವಾದ ಶ್ರೀಯಾಜ್ಞವಲ್ಕ್ಯಸ್ಮೃತಿಯಿಂದ ಈ ಶ್ಲೋಕವನ್ನು ( ಎಂದರೆ ಈ ಪಾಠವನ್ನು ) ಸ್ವೀಕರಿಸಿದ್ದೇವೆ.

ಗಳಿಗೆ "**ವೇದತ್ರಯೀ**" ಎಂದು ಹೆಸರು. ಈ ಮೂರು ವೇದಗಳಲ್ಲಿ ಪ್ರತಿಯೊಂದರಲ್ಲಿ ಸಂಹಿತೆಯು ಪ್ರತ್ಯೇಕವಾಗಿದೆ; ಬ್ರಾಹ್ಮಣವು ಪ್ರತ್ಯೇಕ ವಾಗಿದೆ. ಎಂದರೆ ಈ ಪ್ರತಿಯೊಂದು ವೇದವಲ್ಲಿ-ಸಂಹಿತೆ, ಬ್ರಾಹ್ಮಣ ಗಳು ಪೃಥಕ್‌ಪ್ರಥಕ್ಕಾಗಿ ಇರುತ್ತವೆ.

ತ್ರೇತಾಯುಗವು ಮುಗಿದಬಳಿಕ ಮುಂದೆ ದ್ವಾಪರ ಯುಗದ ಆದಿಯಲ್ಲಿ ಕೃಷ್ಣದ್ವೈಪಾಯನ ವ್ಯಾಸರು-ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಅಂತರ್ಗತವಾಗಿದ್ದ ಅಥರ್ವಾಂಗಿರಸ ವೇದವನ್ನು ಎಂದರೆ ಅಥರ್ವವೇದವನ್ನು ಬೇರ್ಪಡಿಸಿ, ಅದನ್ನು ನಾಲ್ಕನೆಯ ವೇದ ವನ್ನಾಗಿ ಮಾಡಿದರು. ಇಷ್ಟುಮಾತ್ರವೇ ಅಲ್ಲ, ಈ ನಾಲ್ಕೂ ವೇದ ಗಳ ಪದ್ಧತಿಯಿಂದ ಭಿನ್ನವಾದ ಪದ್ಧತಿಯುಳ್ಳಂಥ ಎಂದರೆ ಮನ್ತ್ರ, ಬ್ರಾಹ್ಮಣಗಳು ಪೃಥಕ್‌ಪೃಥಕ್ಕಾಗಿರದೆ, ಮನ್ತ್ರ, ಬ್ರಾಹ್ಮಣಗಳು-ಏಕತ್ರ ವಾಗಿರುವಂತೆ ಮಿಶ್ರರಚನಾಯುಕ್ತವಾದ "**ಕೃಷ್ಣ ಯಜುರ್ವೇದ**" (ಎಂದರೆ ಮಿಶ್ರ ಯಜುರ್ವೇದ) ಎಂಬ ನೂತನ ಪದ್ಧತಿಯ ಯಜು ರ್ವೇದವೊಂದನ್ನು ಏರ್ಪಡಿಸಿದರು. ಅರ್ಥಾತ್ ಅಂದಿನಿಂದ ಈ ಮಿಶ್ರ ಯಜುರ್ವೇದದಿಂದ ಬೇರೆಮಾಡಿ ಹೇಳುವುದಕ್ಕೋಸ್ಕರ ಪ್ರಾಚೀನ ಮೂಲ (೨) ಯಜುರ್ವೇದವನ್ನು, "**ಶುದ್ಧ ಯಜುರ್ವೇದ**" ಎಂದರೆ "**ಶುಕ್ಲ ಯಜುರ್ವೇದ**" ಎಂಬ ಹೆಸರಿನಿಂದ ಸಂಬೋಧಿಸುವುದು, ಕ್ರಮಪ್ರಾಪ್ತವಾಯಿತು. ಸಾರಾಂಶ, ದ್ವಾಪರಯುಗದಲ್ಲಿ-ಯಜುರ್ವೇದ ದಲ್ಲಿ (೧) ಶುಕ್ಲಯಜುರ್ವೇದ (೨) ಕೃಷ್ಣಯಜುರ್ವೇದ ಎಂಬ ಎರಡು ಪದ್ಧತಿಗಳುಂಟಾದವು. ಈ ಕೃಷ್ಣಯಜುರ್ವೇದವನ್ನು ಈ ಕೃಷ್ಣದ್ವೈಪಾಯನವ್ಯಾಸರು ಏಕೆ ನೂತನವಾಗಿ ಏರ್ಪಡಿಸಿದರು? ಮತ್ತು ಅದನ್ನು ಹೇಗೆ ಏರ್ಪಡಿಸಿದರು? ಎಂಬುವನ್ನು ಇದೇ ಈಗ ಮುಂದೆ ವಿಶದಮಾಡಿ ಹೇಳುವವರಿದ್ದೇವೆ. ಇರಲಿ.

---

(೨) ಶ್ರೀಶುಕ್ಲಯಜುರ್ವೇದವು ಪ್ರಾಚೀನ ಮೂಲ ಯಜುರ್ವೇದವೆಂಬು ದನ್ನು ೪ ನೆಯ ಪರಿಶಿಷ್ಟದಲ್ಲಿ ಸಪ್ರಮಾಣವಾಗಿ ಪ್ರತಿಪಾದಿಸಿದ್ದೇವೆ. ಅಲ್ಲಿನೋಡಿರಿ.

ಸಾಕ್ಷಾತ್ ಶ್ರೀಮನ್ನಾರಾಯಣನು, ದ್ವಾಪರ ಯುಗದ ಆದಿಯಲ್ಲಿ ಈ ಕೃಷ್ಣದ್ವೈಪಾಯನ ವ್ಯಾಸಋಷಿಯ ರೂಪವನ್ನು ಧರಿಸಿ, ಪ್ರಾಚೀನ ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರು ವೇದಗಳಿಂದ ಅಥರ್ವವೇದವನ್ನು ಪ್ರತ್ಯೇಕವಾಗಿ ಏರ್ಪಡಿಸಿದ್ದಲ್ಲದೆ ಕೃಷ್ಣಯಜುರ್ವೇದ ವೆಂಬ ನೂತನಪದ್ಧತಿಯ ವೇದವೊಂದನ್ನೂ ಸಹ ಏರ್ಪಡಿಸಿದನು. ಈ ಪ್ರಕಾರ ಒಟ್ಟು ೫ ವೇದಗಳನ್ನು ಮಾಡಿ, ಅವುಗಳನ್ನು ತಮ್ಮ ಶಿಷ್ಯ ರಾದ ಪೈಲ, ವೈಶಂಪಾಯನ, ಸೂರ್ಯ, ಜೈಮಿನಿ, ಸುಮಂತು ಪ್ರಭೃತಿ ಐದು ಜನ ಋಷಿಗಳಿಗೆ ಒಬ್ಬೊಬ್ಬರಿಗೆ ಒಂದೊಂದರಂತೆ ವೇದ ವಿಭಾಗ ಮಾಡಿಕೊಟ್ಟು, ಎಂದರೆ ಒಂದೊಂದು ವೇದವನ್ನು ಉಪದೇಶಮಾಡಿ, ಈ ೫ ಜನ ಶಿಷ್ಯರನ್ನು ಆಯಾ ವೇದದ ಪ್ರವರ್ತಕರನ್ನಾಗಿ ಮಾಡಿದ ನೆಂಬುದು ಪುರಾಣಗಳಲ್ಲಿ ಉಕ್ತವಾಗಿದೆ. ಇದೇ ಸಂಗತಿಯನ್ನು ಶ್ರೀಮನ್ಮಧ್ವಾಚಾರ್ಯರು-ತಾವು ಬರೆದ ಭಾರತತಾತ್ಪರ್ಯನಿರ್ಣಯ ವೆಂಬ ಗ್ರಂಥದ ೧೦ನೆಯ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ:—

> ಋಚಾಂ ಪ್ರವರ್ತಕಂ **ಪೈಲಂ** ಯಜುಷಾಂಚ ಪ್ರವರ್ತಕಂ ।
> **ವೈಶಂಪಾಯನ**ಮೇವೈಕಂ ದ್ವಿತೀಯಂ **ಸೂರ್ಯ**ಮೇವಚ ॥೭೬॥
> ಚಕ್ರೇಥ **ಜೈಮಿನಿಂ** ಸಾಮ್ನಾಮಥರ್ವಾಂಗಿರಸಾಮಪಿ ।
> **ಸುಮಂತುಂ** ಭಾರತಸ್ಯಾಪಿ ವೈಶಂಪಾಯನಮಾದಿಶತ್ ॥ ೭೭ ॥

ಎಂದರೆ, ವ್ಯಾಸ ಮಹರ್ಷಿಗಳು-ಪೈಲಋಷಿಗೆ ಋಗ್ವೇದವನ್ನೂ, ವೈಶಂಪಾಯನ ಋಷಿಗೆ ಕೃಷ್ಣಯಜುರ್ವೇದವನ್ನೂ, ಸೂರ್ಯ (೩) ಋಷಿಗೆ ಶುಕ್ಲಯಜುರ್ವೇದವನ್ನೂ ಹಾಗೂ ಜೈಮಿನಿ ಋಷಿಗೆ ಸಾಮ-

---

(೩) ಭಗವಾನ್ ಸೂರ್ಯನಾರಾಯಣನ ಅವತಾರರಾದ **ಸೂರ್ಯ**ಋಷಿಗಳು ವ್ಯಾಸಮಹರ್ಷಿಗಳ ಶಿಷ್ಯರಾಗಿದ್ದು, **ಈ** ಆದಿತ್ಯಮುಷಿಗಳೇ **ಯಾಜ್ಞವಲ್ಕ್ಯರಿಗೆ** ಶ್ರೀಶುಕ್ಲಯಜುರ್ವೇದವನ್ನು ಉಪದೇಶಮಾಡಿದರೆಂಬುದನ್ನು **ಸಪ್ರಮಾಣವಾಗಿ** ಸಿದ್ಧಮಾಡಿದ್ದೇವೆ. ಇದೇ ಅಧ್ಯಾಯದಲ್ಲಿ **ಮುಂದೆ ನೋಡಿರಿ.**

ವೇದವನ್ನೂ, ಸುಮಂತು ಋಷಿಗೆ ಅಥರ್ವವೇದವನ್ನೂ ಉಪದೇಶಮಾಡಿ, ಇವರೆಲ್ಲರನ್ನು ಆಯಾವೇದದ ಪ್ರವರ್ತಕರನ್ನಾಗಿ ಮಾಡಿದರೆಂದು ಇತ್ಯರ್ಥ.

ಶ್ರೀ ಯಾಜ್ಞವಲ್ಕ್ಯರು, ಇದೇ ದ್ವಾಪರ ಯುಗದಲ್ಲಿ ವ್ಯಾಸ-ಮಹರ್ಷಿಗಳ ಶಿಷ್ಯರಾದ ಪೈಲ, ವೈಶಂಪಾಯನ, ಸೂರ್ಯ, ಜೈಮಿನಿ, ಸುಮಂತು ಪ್ರಭೃತಿ ಋಷಿವರ್ಯರ ಸಮಕಾಲೀನರಾಗಿದ್ದರು. ಇಷ್ಟೇ ಅಲ್ಲ ಇವರೆಲ್ಲರ ಶಿಷ್ಯರಾಗಿದ್ದರು. ಆಧುನಿಕ ಪಂಡಿತರು ಶ್ರೀ ಯಾಜ್ಞ-ವಲ್ಕ್ಯರ ಕಾಲವನ್ನು ಕ್ರಿಸ್ತಪೂರ್ವ ೩ ಸಾವಿರ ವರ್ಷಗಳ ಹಿಂದೆ ಎಂದರೆ ಇಂದಿಗೆ ೫ ಸಾವಿರ ವರ್ಷಗಳ ಹಿಂದೆ ಎಂದು ಊಹಿಸಿದ್ದಾರೆ. ಇರಲಿ.

ಈ ಕೃಷ್ಣದ್ವೈಪಾಯನವ್ಯಾಸರು ಕೃಷ್ಣಯಜುರ್ವೇದವನ್ನು ಏಕೆ ಮತ್ತು ಹೇಗೆ ನಿರ್ಮಿಸಿದರು? ಎಂಬುದನ್ನು ಸ್ಪಷ್ಟಮಾಡಿ ಹೇಳಿಬಿಟ್ಟರೆ, ಯಾಜ್ಞವಲ್ಕ್ಯರು ಈ ಕೃಷ್ಣಯಜುರ್ವೇದದ ಶಾಖಾಪ್ರವರ್ತಕ ಋಷಿಗಳು ಹೇಗೆಂಬುದು ಚೆನ್ನಾಗಿ ತಿಳಿದುಬರುವುದು. ಆದುದರಿಂದ ಕೃಷ್ಣಯಜುರ್ವೇದದ ಜನ್ಮವೃತ್ತಾಂತವನ್ನು ಹೇಳಲಾರಂಭಿಸುವಾ.

ಚತುರ್ವೇದ ಭಾಷ್ಯಕಾರರೆಂದು ಜಗದ್ವಿಖ್ಯಾತರಾದ ಶ್ರೀ ಸಾಯ-ಣಾಚಾರ್ಯರು, ಯಜ್ಞಯಾಗಾದಿ ಕರ್ಮಕಾಂಡದಲ್ಲಿ ಯಜುರ್ವೇದಕೆ ಪ್ರಾಧಾನ್ಯವಿರುತ್ತದೆಂಬುದನ್ನು ತಾವು ಬರೆದ ಶುಕ್ಲಯಜುರ್ವೇದ ಕಾಣ ಸಂಹಿತೆಯ ಭಾಷ್ಯದಲ್ಲಿ ೯ನೆಯ ಪುಟದಲ್ಲಿ ಹೀಗೆ ಹೇಳಿದ್ದಾರೆ:—" ತಥಾ **ಸತಿ ಭಿತ್ತಿಸ್ಥಾನೀಯೋ ಯಜುರ್ವೇದಃ। ಚಿತ್ರಸ್ಥಾನೀಯಾವಿತರೌ। ತಸ್ಮಾತ್ ಕರ್ಮಸು ಯಜುರ್ವೇದಸ್ಯ ಪ್ರಾಧಾನ್ಯಮ್ ।** "

( ಪ್ರಥಮದಶಕೇ । ಪ್ರಥಮ ಅಧ್ಯಾಯಃ । )

ಎಂದರೆ, ಯಜ್ಞಯಾಗಾದಿ ಕರ್ಮಕಾಂಡದಲ್ಲಿ ಯಜುರ್ವೇದವು ಭಿತ್ತಿಸ್ಥಾನವನ್ನು ಹೊಂದಿರುತ್ತದೆ. ಎಂದರೆ ಮನೆಗೆ ಗೋಡೆಯು ಹೇಗೆ ಮುಖ್ಯವಾಗಿರುತ್ತದೆಯೋ, ಹಾಗೆಯೇ ಯಜ್ಞದಲ್ಲಿ ಯಜುರ್ವೇದವು ಪ್ರಧಾನವಾಗಿದೆ. ಈ ದೃಷ್ಟಿಯಿಂದ ಯಜ್ಞಯಾಗಾದಿ ಕರ್ಮಕಾಂಡದಲ್ಲಿ ಋಗ್ವೇದ, ಸಾಮವೇದಗಳು ಚಿತ್ರಗಳ ಸ್ಥಾನವನ್ನು ಹೊಂದಿ

ರುತ್ತವೆ. ಎಂದರೆ ಮಿಕ್ಕ ಇವೆರಡು ವೇದಗಳು ಮನೆಯ ಗೋಡೆಯ ಮೇಲಿನ ಚಿತ್ರಗಳಂತೆ ಯಜ್ಞದಲ್ಲಿ ಅಪ್ರಧಾನವಾಗಿರುತ್ತವೆ. ಆದ್ದರಿಂದ ಈ ವೇದತ್ರಯಿಯಲ್ಲಿ* ಯಜುರ್ವೇದಕ್ಕೆ ಯಜ್ಞಯಾಗಾದಿ ಕರ್ಮ ಕಾಂಡದಲ್ಲಿ ಪ್ರಾಧಾನ್ಯವುಂಟು; ಎಂದು ಇತ್ಯರ್ಥ.

ಈಪ್ರಕಾರ ಯಜುರ್ವೇದವು, ಯಜ್ಞಪ್ರಧಾನವಾದ ಎಂದರೆ ಯಜ್ಞಕರ್ಮ ವಿವರಣಪ್ರಧಾನವಾದ ವೇದವಾಗಿದ್ದುದರಿಂದಲೂ ಹಾಗೂ ಈ ಯಜ್ಞಯಾಗಾದಿ ಕರ್ಮಕಾಂಡವು ಗಹನವಾದದ್ದೂ ಬಹು ವಿಶಾಲ ವಾದದ್ದೂ ಆಗಿರುವುದರಿಂದಲೂ ವೇದವ್ಯಾಸರು, ಯಜ್ಞದಲ್ಲಿ ಋತ್ವಿಜರಿಗೆ ಕರ್ಮಕಲಾಪದಲ್ಲಿ ಚೆನ್ನಾಗಿ ಸೌಕರ್ಯವುಂಟಾಗಲೆಂಬ ಉದ್ದೇಶದಿಂದ, ಈ ಯಜುರ್ವೇದದಲ್ಲಿ ಇನ್ನೊಂದು ಹೊಸಪದ್ಧತಿಯನ್ನು ಹೀಗೆ ಏರ್ಪಡಿಸಿದರು:—ಸಂಹಿತೆಯಲ್ಲಿ ಪ್ರತಿಯೊಂದು ಮಂತ್ರದ ಅಡಿಯಲ್ಲಿಯೇ ಆ ಮಂತ್ರದ ಸ್ಪಷ್ಟೀಕರಣವಾದ ಬ್ರಾಹ್ಮಣವನ್ನು ಸೇರಿಸಿದರೆ ಋತ್ವಿಜರಿಗೆ ಸುಕರವಾಗುವುದೆಂದು ತಿಳಿದು, ಮಂತ್ರ ಬ್ರಾಹ್ಮಣಗಳು ಏಕತ್ರವಾಗಿರುವಂತೆ ಸಂಹಿತೆಯಲ್ಲಿ ಬ್ರಾಹ್ಮಣವನ್ನು ಮಿಶ್ರಮಾಡಿದರು. ಆದುದರಿಂದ ಈ ನೂತನ ಪದ್ಧತಿಯ ಯಜುರ್ವೇದಕ್ಕೆ "**ಮಿಶ್ರಯಜುರ್ವೇದ**" ಎಂದರೆ "**ಕೃಷ್ಣಯಜುರ್ವೇದ**" ಎಂಬ ಹೆಸರು ಪ್ರಾಪ್ತವಾಯಿತು.

ಋಗ್ವೇದ, ಶುಕ್ಲಯಜುರ್ವೇದ, ಸಾಮವೇದ, ಅಥರ್ವವೇದ ಈ ನಾಲ್ಕೂ ವೇದಗಳು ಒಂದೇ ಪದ್ಧತಿಯಿಂದ ಇರುತ್ತವೆ; ಆದರೆ ಕೃಷ್ಣಯಜುರ್ವೇದವೊಂದೇ ಒಂದು ಮಾತ್ರ ವಿಲಕ್ಷಣವಾದ ಪದ್ಧತಿಯುಳ್ಳದ್ದಾಗಿದೆ. ಈ ಪದ್ಧತಿಗಳನ್ನು ಆಕೃತಿಗಳಿಂದ ಸ್ಪಷ್ಟಮಾಡಿತೋರಿಸುವಾ.

---

* ಹರಿವಂಶಪುರಾಣದಲ್ಲಿ ಹೀಗೆ ಹೇಳಿದೆ:—"ಋಚೋ ಯಜೂಂಷಿ ಸಾಮಾನಿ ನಿರ್ಮಮೇ ಯಜ್ಞಸಿದ್ಧಯೇ । (ಹರಿವಂಶ ೧೦,೪೭) ಎಂದರೆ, ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರು ವೇದಗಳು ಯಜ್ಞದ, ಸಿದ್ಧಿಗೋಸ್ಕರವಾಗಿ ನಿರ್ಮಾಣವಾಗಿರುತ್ತವೆ.

| (ಋಗ್ವೇದ) | (ಶುಕ್ಲಯಜುರ್ವೇದ) | (ಸಾಮವೇದ) | (ಅಥರ್ವವೇದ) |
|---|---|---|---|
| ೧<br>ಸಂಹಿತೆಯಲ್ಲಿಯ ಸಂಪೂರ್ಣ ಮಂತ್ರಗಳು | ೨<br>ಸಂಹಿತೆಯಲ್ಲಿಯ ಸಂಪೂರ್ಣ ಮಂತ್ರಗಳು | ೩<br>ಸಂಹಿತೆಯಲ್ಲಿಯ ಸಂಪೂರ್ಣ ಮಂತ್ರಗಳು | ೪<br>ಸಂಹಿತೆಯಲ್ಲಿಯ ಸಂಪೂರ್ಣ ಮಂತ್ರಗಳು |

| ೧ | ೨ | ೩ | ೪ |
|---|---|---|---|
| ಸಂಪೂರ್ಣ ಬ್ರಾಹ್ಮಣ | ಸಂಪೂರ್ಣ ಬ್ರಾಹ್ಮಣ | ಸಂಪೂರ್ಣ ಬ್ರಾಹ್ಮಣ | ಸಂಪೂರ್ಣ ಬಾಹ್ಮಣ |

ಈ ನಾಲ್ಕೂ ವೇದಗಳಲ್ಲಿ ಪ್ರತಿಯೊಂದರಲ್ಲಿ ಸಂಹಿತೆಯು ಪ್ರತ್ಯೇಕವಾಗಿದೆ; ಬ್ರಾಹ್ಮಣವು ಪ್ರತ್ಯೇಕವಾಗಿವೆ. ಎಂದರೆ ಸಮಸ್ತಮಂತ್ರಗಳ ಸಮೂಹವು ಹಾಗೂ ಸಮಸ್ತ ಬ್ರಾಹ್ಮಣವು ಪೃಥಕ್ ಪ್ರಥಕ್ಕಾಗಿವೆ.

ಆದರೆ ಕೃಷ್ಣಯಜುರ್ವೇದ ಒಂದರಲ್ಲಿಯೇ ಮಾತ್ರ ಸಂಹಿತೆ, ಬ್ರಾಹ್ಮಣಗಳು ಪೃಥಕ್‌ಪ್ರಥಕ್ಕಾಗಿರದೆ, ಸಂಹಿತೆಯಲ್ಲಿ ಬ್ರಾಹ್ಮಣವು ಮಿಶ್ರವಾಗಿವೆ. ಹೇಗೆಂದರೆ:—

(ಕೃಷ್ಣಯಜುರ್ವೇದ)

| ಖಂಡಶಃ |
|---|
| ಮಂತ್ರ<br>ಬ್ರಾಹ್ಮಣ<br>ಮಂತ್ರ<br>ಬ್ರಾಹ್ಮಣ<br>ಮಂತ್ರ<br>ಬ್ರಾಹ್ಮಣ<br>ಮಂತ್ರ<br>ಬ್ರಾಹ್ಮಣ |

ಈ ಶುಕ್ಲಯಜುರ್ವೇದ, ಕೃಷ್ಣಯಜುರ್ವೇದಗಳ ಬಗ್ಗೆ ಕೃಷ್ಣ ಯಜುರ್ವೇದಾನ್ತರ್ಗತ ತೈತ್ತಿರೀಯ ಶಾಖೆಯ ಬ್ರಾಹ್ಮಣರಾದ ಶ್ರೀ ಶಂಕರಾಚಾರ್ಯರು ಮತ್ತು ಶ್ರೀಸಾಯಣಾಚಾರ್ಯರು ಹೀಗೆ ಹೇಳಿದ್ದಾರೆ:—

ಶ್ರೀಶಂಕರಾಚಾರ್ಯರು, ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದ ಕೊನೆಯಲ್ಲಿ (ಅ. ೬, ಬ್ರಾ. ೫):—"ತಾನೀಮಾನಿ ಶುಕ್ಲಾನೀತ್ಯವ್ಯಾಮಿಶ್ರಾಣಿ ಬ್ರಾಹ್ಮಣೇನ। ಅಥವಾ ಯಾನೀಮಾನಿ ಯಜೂಂಷಿ ತಾನಿ ಶುಕ್ಲಾನಿ ಶುದ್ಧಾನೀತ್ಯೇತತ್ ।" ಎಂದು ಕಂಠೋಕ್ತವಾಗಿ ಹೇಳಿದ್ದಾರೆ; ಎಂದರೆ, ಈ ಶುಕ್ಲಯಜುರ್ವೇದದ ಸಂಹಿತೆಯು ಬ್ರಾಹ್ಮಣದಿಂದ ವ್ಯಾಮಿಶ್ರವಾಗಿರುವುದಿಲ್ಲ. ಆದ್ದರಿಂದ ಈ ಯಜುರ್ವೇದವು ಶುಕ್ಲ-ಯಜುರ್ವೇದವು; ಎಂದರೆ ಶುದ್ಧ ಯಜುರ್ವೇದವೆಂದು ಇತ್ಯರ್ಥ; ಈ ಪ್ರಕಾರ ಶ್ರೀಶಂಕರಾಚಾರ್ಯರು ಘಂಟಾಘೋಷವಾಗಿ ಹೇಳಿದ್ದಾರೆ. ಅತಏವ ಯಾವ ಯಜುರ್ವೇದದ ಸಂಹಿತೆಯು, ಬ್ರಾಹ್ಮಣದಿಂದ ವ್ಯಾಮಿಶ್ರವಾಗಿರುತ್ತದೆಯೋ, ಆ ಯಜುರ್ವೇದವು ಮಿಶ್ರಯಜುರ್ವೇದವು. ಎಂದರೆ ಕೃಷ್ಣಯಜುರ್ವೇದವೆಂದು ಶ್ರೀಶಂಕರಾಚಾರ್ಯರು ತಮ್ಮ ಅಭಿಪ್ರಾಯವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆಂಬುದು ಸಿದ್ಧ.

ಶ್ರೀಶಂಕರಾಚಾರ್ಯರು, ಯಾವ ಯಜುರ್ವೇದದ ಸಂಹಿತೆಯು ಬ್ರಾಹ್ಮಣದಿಂದ ಮಿಶ್ರವಾಗಿರುವುದಿಲ್ಲವೋ ಆ ಯಜುರ್ವೇದವು ಶುಕ್ಲ (=ಶುದ್ಧ) ಯಜುರ್ವೇದವೆಂತಲೂ, ಯಾವ ಯಜುರ್ವೇದದ ಸಂಹಿತೆಯು ಬ್ರಾಹ್ಮಣದಿಂದ ಮಿಶ್ರವಾಗಿರುತ್ತದೆಯೋ ಆ ಯಜುರ್ವೇದವು ಕೃಷ್ಣ (=ಮಿಶ್ರ) ಯಜುರ್ವೇದವೆಂತಲೂ ಸ್ಪಷ್ಟವಾಗಿ ವ್ಯಕ್ತಪಡಿಸಿದರು. ಇದೊಂದು ದೃಷ್ಟಿಯಿಂದ ಶುಕ್ಲ, ಕೃಷ್ಣಯಜುರ್ವೇದಗಳ ವಸ್ತುಸ್ಥಿತಿಯನ್ನು ಸ್ಪಷ್ಟಮಾಡಿದರು. ಶ್ರೀಸಾಯಣಾಚಾರ್ಯರು ಇನ್ನೊಂದು ದೃಷ್ಟಿಯಿಂದ ಕೃಷ್ಣಯಜುರ್ವೇದದ ವ್ಯಾಖ್ಯೆಯನ್ನೂ ಶುಕ್ಲಯಜುರ್ವೇದದ ವ್ಯಾಖ್ಯೆಯನ್ನೂ ಹೇಳಿ, ಈ ಉಭಯ ಯಜುರ್ವೇದಗಳ ವಸ್ತುಸ್ಥಿತಿಯನ್ನು ನಿದರ್ಶನಕ್ಕೆ ತಂದುಕೊಟ್ಟಿದ್ದಾರೆ. ಅದು ಹೇಗೆಂದರೆ,

ಶ್ರೀಸಾಯಣಾಚಾರ್ಯರು ಶುಕ್ಲ ಯಜುರ್ವೇದ ಕಾಣ್ವಸಂಹಿತೆಯ ಭಾಷ್ಯದ ಉಪೋದ್ಘಾತದಲ್ಲಿ ಹೀಗೆ ಹೇಳಿದ್ದಾರೆ:—

ಆಧ್ವರ್ಯವಂ ಕ್ವಚಿದ್ಧೌತ್ರಂ ಕ್ವಚಿದಿತ್ಯವ್ಯವಸ್ಥಯಾ ।
ಬುದ್ಧಿಮಾಲಿನ್ಯಹೇತುತ್ವಾದ್ಯಜುಃ ಕೃಷ್ಣಮಿತೀರ್ಯತೇ ॥೧೦॥

ಅರ್ಥ:—ಒಂದು ಸ್ಥಳದಲ್ಲಿ ಅಧ್ವರ್ಯುವಿನ ಕರ್ಮವಿವೇಚನೆಯು, ಮತ್ತಿನ್ನೆಲ್ಲಿಯೋ ಒಂದು ಸ್ಥಳದಲ್ಲಿ ಹೋತೃವಿನ ಕರ್ಮವಿವೇಚನೆಯು ಇದ್ದು, ತಿಳಿದುಕೊಳ್ಳಲು ಕ್ಲೇಶವಾಗುವಷ್ಟು ಅವ್ಯವಸ್ಥಿತವಾಗಿದ್ದಂಥ ಯಜುರ್ವೇದಕ್ಕೆ ಕೃಷ್ಣಯಜುರ್ವೇದವೆಂಬ ಹೆಸರು.

ಯಾಜ್ಞವಲ್ಕ್ಯಸ್ತತಃ ಸೂರ್ಯಮಾರಾಧ್ಯಾಽಸ್ಮಾದಧೀತವಾನ್ ।
ವ್ಯವಸ್ಥಿತ ಪ್ರಕರಣಂ ಯದ್ಯಜುಃ ಶುಕ್ಲಂ ತದೀರ್ಯತೇ ॥೧೧॥

ಅರ್ಥ:—ಯಾಜ್ಞವಲ್ಕ್ಯರು, ಸೂರ್ಯಋಷಿಯನ್ನು ಭಕ್ತಿಪುರಸ್ಸರವಾಗಿ ಸೇವಿಸಿ, ಆ ಆದಿತ್ಯಋಷಿಯಿಂದ ಅಧ್ಯಯನ ಮಾಡಿದಂಥ ಯಜುರ್ವೇದದಲ್ಲಿ, ವ್ಯವಸ್ಥಿತವಾದ ಪ್ರಕರಣಗಳಿರುವುದರಿಂದ ಈ ಯಜುರ್ವೇದಕ್ಕೆ ಶುಕ್ಲ ಯಜುರ್ವೇದವೆಂಬ ಹೆಸರು.

ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ. ಸ್ವತಃ ಕೃಷ್ಣ ಯಜುರ್ವೇದೀಯ ಬ್ರಾಹ್ಮಣರಾದ ಶ್ರೀಶಂಕರಾಚಾರ್ಯರೂ, ಶ್ರೀಸಾಯಣಾಚಾರ್ಯರೂ ಕೇವಲ ಸತ್ಯಾನ್ವೇಷಣ ಬುದ್ಧಿಯಿಂದಲೂ ನಿರಂಜನ ದೃಷ್ಟಿಯಿಂದಲೂ ಕೃಷ್ಣಯಜುರ್ವೇದವು ಮಿಶ್ರವಾಗಿಯೂ ಅವ್ಯವಸ್ಥಿತವಾಗಿಯೂ ಇರುತ್ತದೆಂದು ಮುಕ್ತಕಂಠದಿಂದ ಹೇಳಿದ್ದಾರೆ. ಇದು ಕೃಷ್ಣಯಜುರ್ವೇದದ ವಸ್ತುಸ್ಥಿತಿಯ ನಿರೂಪಣವೇ ಹೊರತು ಕೃಷ್ಣ ಯಜುರ್ವೇದದ ನಿಂದೆಯೆಂದು ಯಾರೂ ತಿಳಿಯಕೂಡದು.

ಈ ರೀತಿ ಕೃಷ್ಣಯಜುರ್ವೇದವು, ಅವ್ಯವಸ್ಥಿತವಾಗಿ ಮಿಶ್ರವಾಗಿರುವುದರಿಂದ ಹಾಗೂ ಇದೇ ಮೇರೆಗೆ ಕಾಠಿಕೆಯು ಅವ್ಯವಸ್ಥಿತವಾಗಿ ಮಿಶ್ರವಾಗಿರುವುದರಿಂದ* ಅರ್ಥಾತ್ ಇವೆರಡರಲ್ಲಿ ಅವ್ಯವಸ್ಥಿತ ಮಿಶ್ರತ್ವ

ರೂಪವಾದ ಗುಣಸಾದೃಶ್ಯವಿದ್ದುದರಿಂದ ಶ್ರೀವೇದವ್ಯಾಸ ಮಹರ್ಷಿಗಳು, ಈ ಕೃಷ್ಣಯಜುರ್ವೇದಕ್ಕೆ ಕಾರಿಕೆಯ ರೂಪವನ್ನು ಕೊಟ್ಟು, ಗುಣವಾದಾತ್ಮಕವಾದ ಎಂದರೆ ಗುಣಾರ್ಥವಾದಾತ್ಮಕವಾದ ಒಂದು ಆಖ್ಯಾಯಿಕೆಯನ್ನು ಅಥವಾ ರೂಪಕವನ್ನು ರಚಿಸಿ, ವಿಷ್ಣುಪುರಾಣದಲ್ಲಿ ಹೇಳಿದ್ದಾರೆ. ಈ ಆಖ್ಯಾಯಿಕೆಯನ್ನು ಅಥವಾ ಈ ರೂಪಕವನ್ನು ಮೀಮಾಂಸಾ ಶಾಸ್ತ್ರದ ದೃಷ್ಟಿಯಿಂದಲೂ ನಾಟ್ಯಶಾಸ್ತ್ರದ ದೃಷ್ಟಿಯಿಂದಲೂ ಪರೀಕ್ಷಿಸಿ ನೋಡಿದರೆ, ಶ್ರೀಯಾಜ್ಞವಲ್ಕ್ಯರು ಕೃಷ್ಣಯಜುರ್ವೇದದ ಶಾಖಾಪ್ರವರ್ತಕ ಋಷಿಗಳೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಅದು ಹೇಗೆಂದರೆ:—

ಮೊಟ್ಟಮೊದಲು ಈ ಆಖ್ಯಾಯಿಕೆಯನ್ನು ಸಂಪೂರ್ಣವಾಗಿ ನಿರೂಪಿಸಿ, ಆ ಬಳಿಕ ಈ ರೂಪಕವನ್ನು ಮೀಮಾಂಸಾಶಾಸ್ತ್ರ, ನಾಟ್ಯಶಾಸ್ತ್ರಗಳ ದೃಷ್ಟಿಯಿಂದ ಪರೀಕ್ಷಿಸುವಾ,

ಮಹರ್ಷಿ ವ್ಯಾಸಪ್ರಣೀತವಾದ ಶ್ರೀವಿಷ್ಣು ಪುರಾಣದಲ್ಲಿ (ತೃತೀಯಾಂಶೇ ಪಂಚಮೋಽಧ್ಯಾಯಃ) ಹೀಗೆ ಉಕ್ತವಾಗಿದೆ:—

ಪರಾಶರ ಉವಾಚ ||

ಯಜುರ್ವೇದತರೋಃ ಶಾಖಾಃ ಸಪ್ತವಿಂಶನ್ಮಹಾಮತಿಃ |
ವೈಶಮ್ಪಾಯನ ನಾಮಾಽಸೌ ವ್ಯಾಸಶಿಷ್ಯಶ್ಚಕಾರ ವೈ |
ಶಿಷ್ಯೇಭ್ಯಃ ಪ್ರದದೌ ತಾಶ್ಚ ಜಗೃಹುಸ್ತೇಽಪ್ಯನುಕ್ರಮಾತ್ ||೧||
ಯಾಜ್ಞವಲ್ಕ್ಯಸ್ತು ತಸ್ಯಾಭೂದ್ಬ್ರಹ್ಮರಾತಸುತೋ ದ್ವಿಜಃ |
ಶಿಷ್ಯಃ ಪರಮಧರ್ಮಜ್ಞೋ ಗುರುವೃತ್ತಿಪರಃ ಸದಾ ||೨||

ಇತ್ಯಾದಿ

---

* ಊಟಕ್ಕೆ ಕುಳಿತಾಗ್ಗೆ ಎಲೆಯಲ್ಲಿ (ಎಂದರೆ ಭೋಜನ ಪಾತ್ರದಲ್ಲಿ) ಅನ್ನ, ಪಾಯಸ, ಹೋಳಿಗೆ, ಕಾಯರಸ, ಪಲ್ಯೆ, ಉಪ್ಪಿನಕಾಯಿ, ಸಂಡಿಗೆ, ಹಪ್ಪಳ, ತುಪ್ಪ ಮುಂತಾದ ಉಣ್ಣುವ ತಿನ್ನುವ ಪದಾರ್ಥಗಳನ್ನೆಲ್ಲ ಬೇರೆಬೇರೆಯಾಗಿ ಬಡಿಸಿರುತ್ತಾರೆ. ಇವುಗಳನ್ನು ನಾವು ಬೇರೆಬೇರೆಯಾಗಿಯೇ ತೆಗೆದುಕೊಂಡು

ಎಂದರೆ, ವ್ಯಾಸಮಹರ್ಷಿಗಳ ಶಿಷ್ಯರಾದ **ಮಹಾಜ್ಞಾನಿಗಳಾದ** ವೈಶಂಪಾಯನರು ಯಜುರ್ವೇದವೆಂಬ ವೃಕ್ಷಕ್ಕೆ ಇಪ್ಪತ್ತೇಳು ಶಾಖೆಗಳನ್ನು ಮಾಡಿ, ಅವುಗಳನ್ನು ಶಿಷ್ಯರಿಗೆ ಕೊಟ್ಟರು. ಬ್ರಹ್ಮರಾತನ ಪುತ್ರನಾದಂಥ, **ಶ್ರೇಷ್ಠಧರ್ಮಜ್ಞನಾದಂಥ** ಹಾಗೂ **ಗುರುಗಳ ಸೇವೆಯಲ್ಲಿ ನಿರಂತರ ದಕ್ಷನಾಗಿದ್ದಂಥ** ಯಾಜ್ಞವಲ್ಕ್ಯನು ವೈಶಂಪಾಯನರ ಶಿಷ್ಯನಾಗಿದ್ದನು; ಇರಲಿ. ಋಷಿಗಳೆಲ್ಲರೂ ಆ ಪ್ರಾಚೀನ ಕಾಲದಲ್ಲಿ ಒಂದಾನೊಂದು ದಿವಸ-" ಈ ದಿವಸ ಮೇರು ಪರ್ವತದ ಮೇಲೆ ಎಲ್ಲ ಋಷಿಗಳೂ ಬರತಕ್ಕದ್ದು; ಆ ಪರ್ವತದ ಮೇಲೆ ಈ ಋಷಿ ಸಮಾಜದಲ್ಲಿ ಯಾವ ಋಷಿಯು ಬರುವುದಿಲ್ಲವೋ, ಆ ಋಷಿಯಿಂದ ಏಳು ದಿವಸಗಳಲ್ಲಿ ಬ್ರಹ್ಮಹತ್ಯೆಯು ಘಟಿಸುವುದು. " ಎಂದು ಆ ಸಮಸ್ತ ಋಷಿಗಳೂ ನಿಯಮಮಾಡಿದ್ದರು. ಆ ಕಾಲದಲ್ಲಿ ಈ ವೈಶಂಪಾಯನರೊಬ್ಬರೇ ಆ ನಿಯಮದ ಉಲ್ಲಂಘನ ಮಾಡಿದರು. ಆದುದರಿಂದ ಆ ಋಷಿಗಳ ನಿಯಮದ ಪ್ರಕಾರ ಈ ವೈಶಂಪಾಯನರ ಪಾದದ ಸ್ಪರ್ಶದಿಂದ (ಎಂದರೆ ಇವರು ಕಾಲಿನಿಂದ ತುಳಿದದ್ದರಿಂದ) ಇವರ ಸಹೋದರಿಯ ಹಸುಮಗನು ಮರಣಹೊಂದಿದನು. ಅರ್ಥಾತ್ ವೈಶಂಪಾಯನರಿಂದ ಬ್ರಹ್ಮಹತ್ಯೆಯು ಘಟಿಸಿತು. ಆಗ ಇವರು ತಮ್ಮ ಶಿಷ್ಯರಿಗೆ ಹೀಗೆ ಹೇಳಿದರು:—" ಶಿಷ್ಯರೇ, ನನಗೋಸ್ಕರ ನೀವೆಲ್ಲರೂ ಈ ಬ್ರಹ್ಮಹತ್ಯೆಯ ಪಾಪವನ್ನು ನಾಶಮಾಡುವ ಪ್ರಾಯಶ್ಚಿತ್ತ ರೂಪವಾದ ವ್ರತವನ್ನು ಮಾಡಿರಿ. ಈ ಬಗ್ಗೆ (ಮಹಾಪಾತಕ ಮಾಡುವವರು ಒಬ್ಬರು; ಹಾಗೂ ಆ ಪಾತಕವನ್ನು ಪರಿಹಾರ ಮಾಡುವ ವ್ರತವನ್ನು ಮಾಡುವವರು ಬೇರೊಬ್ಬರು; ಇದು ಹೇಗೆ

---

ತಿನ್ನುತ್ತೇವೆ, ಅಥವಾ ಉಣ್ಣುತ್ತೇವೆ. ಆದರೆ ಇವೆಲ್ಲವುಗಳು ನಮ್ಮ ಹೊಟ್ಟೆಯೊಳಗೆ ಹೋದಮೇಲೆ ಅಲ್ಲಿ ಮಿಶ್ರವಾಗುತ್ತವೆ. ಆಗ ನಾವು ಊಟವಾದ ಕೂಡಲೆ (ಯಾವುದೊಂದು ಕಾರಣದಿಂದ) ಕಾರಿಕೊಂಡರೆ, ನಾವು ತಿಂದ ಉಂಡ ಎಲ್ಲ ಪದಾರ್ಥಗಳೂ ಆ ಕಾರಿಕೆಯಲ್ಲಿ ಅವ್ಯವಸ್ಥಿತವಾಗಿ, ಮಿಶ್ರವಾಗಿ ಬಿದ್ದಿರುತ್ತವೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಈ ಗೊತ್ತಿದ್ದ ಸಂಗತಿಯನ್ನೇ ಈ ಸಂದರ್ಭದಲ್ಲಿ ನಮ್ಮ ವಾಚಕರ ಜ್ಞಾಪಕಕ್ಕೆ ತಂದುಕೊಟ್ಟಿದ್ದೇವೆ.

ಯೋಗ್ಯವಾಗುವುದು ? ಎಂಬುದನ್ನು) ವಿಚಾರ ಮಾಡಬೇಡಿರಿ. **ಈ** ಮಾತನ್ನು ಕೇಳಿದ ಬಳಿಕ ವೈಶಂಪಾಯನರಿಗೆ ಯಾಜ್ಞವಲ್ಕ್ಯರು ಹೀಗೆ ಬಿನ್ನವಿಸಿದರು:—" ಪರಮಪೂಜ್ಯ ಗುರುವರ್ಯರೇ, ಈ ಅಲ್ಪ ತೇಜಸ್ವಿಗಳಾದ ಇತರ ಶಿಷ್ಯರಿಗೆ ಈ ವ್ರತವನ್ನು ಮಾಡುವ ಕ್ಲೇಶವನ್ನು ಯಾಕೆ ಕೊಡುತ್ತೀರಿ. ನಾನೊಬ್ಬನೇ ಪ್ರಾಯಶ್ಚಿತ್ತ ರೂಪವಾದ ವ್ರತವನ್ನು ಆಚರಿಸಿ, ಈ ಮಹಾಪಾತಕವನ್ನು ಪರಿಹಾರ ಮಾಡುತ್ತೇನೆ." ಹೀಗೆ ನುಡಿದದ್ದಕ್ಕೆ ವೈಶಂಪಾಯನರು ಯಾಜ್ಞವಲ್ಕ್ಯರ ಮೇಲೆ ಸಿಟ್ಟಾಗಿ " ಇತರ ಶಿಷ್ಯರಾದ ಈ ಬ್ರಾಹ್ಮಣರನ್ನು ನಿಸ್ತೇಜರೆಂದು ಸಂಬೋಧಿಸಿ, ಇವರ ಅಪಮಾನ ಮಾಡಿದ್ದಲ್ಲವೆ ನನ್ನ ಆಜ್ಞೆಯನ್ನು ಮುರಿದದ್ದರಿಂದ ನೀನು ನನ್ನಿಂದ ಅಧ್ಯಯನ ಮಾಡಿದಂಥ ವೇದವನ್ನು ತಿರುಗಿಕೊಡು.'' ಎಂದು ಹೇಳಿದರು. ಈ ಮಾತಿಗೆ ಯಾಜ್ಞವಲ್ಕ್ಯರು ಉತ್ತರ ಕೊಟ್ಟಿದ್ದೇನೆಂದರೆ:—'' ನಾನು ತಮ್ಮ ಮೇಲಿನ ಭಕ್ತಿಯಿಂದ ಹೀಗೆಂದೆನು. ಈ ಬ್ರಾಹ್ಮಣರ ಅಪಮಾನ ಮಾಡುವ ಉದ್ದೇಶದಿಂದ ಹಾಗೆ ಎಂದಿರುವುದಿಲ್ಲ. ಒಳ್ಳೇದು, ನೀವು ಕಲಿಸಿರುವ ವೇದವನ್ನು ತೆಗೆದುಕೊಳ್ಳಿರಿ. " ಯಾಜ್ಞವಲ್ಕ್ಯರು ಹೀಗೆ ಹೇಳಿ, ಆ ಯಜುರ್ವೇದವನ್ನು ಕಾರಿದರು. ಆ ಬಳಿಕ ಮಿಕ್ಕ ಶಿಷ್ಯರೆಲ್ಲರೂ **ತಿತ್ತಿರಿ** ಪಕ್ಷಿಯ ರೂಪವನ್ನು ಧಾರಣಮಾಡಿ, ಆ ಕಾರಿಕೆಯ ರೂಪವಾದ ವೇದವನ್ನು ತಿಂದರು. ಆದ್ದರಿಂದ ಈ ವೇದಕ್ಕೆ "**ತೈತ್ತಿರೀಯ**" ಎಂಬ ಹೆಸರು ಪ್ರಾಪ್ತವಾಯಿತು. ಇತ್ತ ಯಾಜ್ಞವಲ್ಕ್ಯರು ಯಜುರ್ವೇದವನ್ನು ಸಂಪಾದಿಸುವ ಇಚ್ಛೆಯಿಂದ ಸೂರ್ಯನನ್ನು ಕುರಿತು ಸ್ತುತಿಸಿದರು. ಈ ಸ್ತುತಿಯಿಂದ ಶ್ರೀಸೂರ್ಯನಾರಾಯಣನು ಪ್ರಸನ್ನನಾಗಿ **ವಾಜಿರೂಪವನ್ನು ಧಾರಣಮಾಡಿ**[೬] ಯಾಜ್ಞವಲ್ಕ್ಯರಿಗೆ ಶುಕ್ಲಯಜುರ್ವೇದವನ್ನು

---

೬ ರವಿಃ ! ವಾಜಿರೂಪಧರಃ (ವಿಷ್ಣುಪುರಾಣ ಅಂಶ ೩, ಅ. ೫, ಶ್ಲೋ. ೨೫)

ಏವಂ ಸ್ತುತಃ ಸ ಭಗವಾನ್ ವಾಜಿರೂಪಧರೋ ರವಿಃ ।
ಯಜೂಂಷ್ಯಯಾತಯಾಮಾನಿ ಮುನಯೇಽದಾತ್ಪ್ರಸಾದತಃ ॥
(ಭಾಗವತ ಸ್ಕಂಧ ೧೨, ಅ. ೬, ಶ್ಲೋ. ೭೩)

ಉಪದೇಶ ಮಾಡಿದನು. ಅನಂತರ ಯಾಜ್ಞವಲ್ಕ್ಯರು ಈ ಶುಕ್ಲಯಜುರ್ವೇದವನ್ನು ಕಣ್ವ, ಮಧ್ಯಂದಿನ ಪ್ರಭೃತಿ ೧೫ ಜನ ಶಿಷ್ಯರಿಗೆ ಅಧ್ಯಯನ ಮಾಡಿಸಿ, ೧೫ ಶಾಖೆಗಳನ್ನು ಏರ್ಪಡಿಸಿದರು.''

ಇನ್ನು ಈ ಆಖ್ಯಾಯಿಕೆಯನ್ನು ಮೀಮಾಂಸಾಶಾಸ್ತ್ರದ ಚಿಕಿತ್ಸಕ ದೃಷ್ಟಿಯಿಂದ ಪರೀಕ್ಷಿಸಿ ನೋಡುವಾ,

ಪುರಾಣಗಳೆಲ್ಲವೂ ವಾಚ್ಯವೃತ್ತಿಯಿಂದ ಪ್ರವೃತ್ತವಾಗಿರದೆ, ಲಕ್ಷಣಾವೃತ್ತಿಯಿಂದ ಪ್ರವೃತ್ತವಾಗಿರುತ್ತವೆ. ಆದುದರಿಂದ "ಲಕ್ಷಣಯಾ ಬೋಧಯನ್ತಿ ಸರ್ವಾಣಿ ಪುರಾಣಾನಿ'' (ಎಂದರೆ ಎಲ್ಲ ಪುರಾಣಗಳು ಲಕ್ಷಣಾವೃತ್ತಿಯಿಂದ ಬೋಧಮಾಡುತ್ತಿವೆ.) ಎಂಬುದು ಸುಪ್ರಸಿದ್ಧವಾಗಿಯೇ ಇದೆ. ಅರ್ಥಾತ್ ಪುರಾಣದೊಳಗಿನ ಆಖ್ಯಾಯಿಕೆಗಳ ಲಾಕ್ಷಣಿಕ ಅರ್ಥವನ್ನು ಎಂದರೆ ವಿವಕ್ಷಿತ ಅರ್ಥವನ್ನು ಸ್ವೀಕರಿಸಿ, ಮಿಕ್ಕ ವಾಚ್ಯಾರ್ಥವನ್ನೆಲ್ಲ ಬಿಟ್ಟುಬಿಡತಕ್ಕದ್ದಾಗಿದೆ; ಎಂದು ಇತ್ಯರ್ಥ.

ಮೀಮಾಂಸಾಶಾಸ್ತ್ರದ ದೃಷ್ಟಿಯಿಂದ ನೋಡಿದರೆ, ಪುರಾಣಾಂತರ್ಗತವಾದ ಈ ಆಖ್ಯಾಯಿಕೆಯು ಸಂಪೂರ್ಣ **ಅರ್ಥವಾದ**ವಾಗಿದೆ; ಅದರಲ್ಲಿಯೂ[೭] **ಗುಣಾರ್ಥವಾದ**ವಾಗಿದೆ. ಎಂದರೆ ವ್ಯಾಸಮಹರ್ಷಿಗಳು ಈ ಆಖ್ಯಾಯಿಕೆಯನ್ನು ಗುಣಾರ್ಥವಾದದ್ದನ್ನಾಗಿ ಮಾಡುವ ಉದ್ದೇಶವನ್ನಿಟ್ಟುಕೊಂಡು, ಇದರಲ್ಲಿ ಪ್ರತ್ಯಕ್ಷ ಪ್ರಮಾಣದಿಂದ— ಬಾಧಿತವಾಗುವ ಮೂರು ಸಂಗತಿಗಳನ್ನು ಯೋಜಿಸಿದ್ದಾರೆ. ಇಷ್ಟೇ ಅಲ್ಲ, ಆಗಮ ಪ್ರಮಾಣದಿಂದಲೂ ಬಾಧಿತವಾಗುವ ಐದು ಸಂಗತಿಗಳನ್ನು ನಿರ್ಮಿಸಿದ್ದಾರೆ. ಮೊದಲು ಈ ಎಂಟು ಸಂಗತಿಗಳನ್ನು ಸ್ಪಷ್ಟಮಾಡಿ ತೋರಿಸಿ, ಆ ಬಳಿಕ ಈ ಆಖ್ಯಾಯಿಕೆಯಿಂದ ಲಾಕ್ಷಣಿಕ ಅರ್ಥವನ್ನು ಎಂದರೆ ವಿವಕ್ಷಿತ ಅರ್ಥವನ್ನು ಮೀಮಾಂಸಾಶಾಸ್ತ್ರಕ್ಕನುಸರಿಸಿ, ಹೇಗೆ ತೆಗೆದುಕೊಳ್ಳಬೇಕೆಂಬುದನ್ನು ನೋಡುವಾ,

---

೭ ಅರ್ಥವಾದದಲ್ಲಿ — ಗುಣವಾದ ಅಥವಾ ಗುಣಾರ್ಥವಾದ, ಅನುವಾದ, **ಭೂತಾರ್ಥವಾದ** ಎಂಬ ಮೂರು ಭೇದಗಳಿವೆ.

ಮೊಟ್ಟಮೊದಲು ಮೀಮಾಂಸಾಶಾಸ್ತ್ರದ ದೃಷ್ಟಿಯಿಂದ ಗುಣವಾದ **ಅಥವಾ** ಗುಣಾರ್ಥವಾದವೆಂದರೇನೆಂಬುದನ್ನು ವಾಚಕರು ತಿಳಿದುಕೊಳ್ಳುವುದು ಅವಶ್ಯವಾಗಿದೆ. ಅರ್ಥಸಂಗ್ರಹವೆಂಬ ಮೀಮಾಂಸಾಶಾಸ್ತ್ರ ಗ್ರಂಥದ ೧೨೪ನೆಯ ಪ್ರತೀಕದಲ್ಲಿ "**ವಿರೋಧೇ ಗುಣವಾದಃ**" ಎಂದು **ಉಕ್ತ**ವಾಗಿದೆ. ಇದರ ಅರ್ಥವು "**ಪ್ರಮಾಣಾನ್ತರ ವಿರೋಧೇ ಸತಿ ಅರ್ಥವಾದೋ ಗುಣವಾದಃ**'' ಎಂದು ಇದೆ. ಇದರ ಅರ್ಥವನ್ನು ಸಹ ಇನ್ನೂ ಹೆಚ್ಚು ಸ್ಪಷ್ಟೀಕರಣಮಾಡಿ ಹೇಳುವುದಾದರೆ ಹೀಗೆ ಹೇಳಬೇಕು. ''**ಪ್ರತ್ಯಕ್ಷಾದಿ ಪ್ರಮಾಣಾನ್ತರ ವಿರೋಧೇ ಸತಿ ಯಃ ಅರ್ಥವಾದಃ ಸ ಗುಣವಾದಃ** |" ಇತ್ಯರ್ಥವೇನೆಂದರೆ, ಪ್ರಮಾಣವು (೧) ಪ್ರತ್ಯಕ್ಷ (೨) ಅನುಮಾನ (೩) ಆಗಮ ಅಥವಾ ಆಪ್ತವಚನ ಎಂದು ಮೂರು ವಿಧವಾಗಿದ್ದು,೮ ಈ ಮೂರರಲ್ಲಿ ಯಾವ ಪ್ರಮಾಣಕ್ಕಾದರೂ ವಿರೋಧವು ಬಂದಾಗ್ಗೆ ಯಾವುದು ಅರ್ಥವಾದವೋ ಅದು **ಗುಣವಾದ** ಅಥವಾ **ಗುಣಾರ್ಥವಾದ**ವು.

(೧) ಈ ಆಖ್ಯಾಯಿಕೆಯಲ್ಲಿ ಯಾಜ್ಞವಲ್ಕ್ಯರು ವೇದವನ್ನು ಕಾರಿದರೆಂದು ಹೇಳಿದ್ದಾರೆ. 'ವೇದ' ಎಂದರೆ ಜ್ಞಾನ;ಮನುಷ್ಯನು ಜ್ಞಾನ

---

೮ ಪ್ರಮಾಣವು i ಪ್ರತ್ಯಕ್ಷ ii ಅನುಮಾನ iii ಆಗಮ ಅಥವಾ ಆಪ್ತವಚನ **ಎಂದು** ಮೂರು ವಿಧವಾಗಿದೆ.

I ಜ್ಞಾನೇಂದ್ರಿಯಕ್ಕೆ ಜ್ಞಾನವಿಷಯದ **ಪ್ರತ್ಯಕ್ಷ** ಸಂನಿಕರ್ಷವು ಎಂದರೆ **ನಿಕಟ**ಸಂಬಂಧವು ಯಾವಾಗ್ಗೆ ಉಂಟಾಗುತ್ತದೆಯೊ, ಆಗ್ಗೆ ಅದಕ್ಕೆ 'ಪ್ರತ್ಯಕ್ಷಜ್ಞಾನ ಎಂದೆನ್ನುತ್ತಾರೆ. ಉದಾ:—ಯಾವುದೊಂದು ವಸ್ತುವನ್ನು ಪ್ರತ್ಯಕ್ಷ ತಮ್ಮ ಕಣ್ಣಿನಿಂದ ನೋಡವುದು; ಅಥವಾ ಧ್ವನಿಯನ್ನು ತಮ್ಮ ಕಿವಿಯಿಂದ ಕೇಳುವುದು; ಇಲ್ಲವೆ ನಾಲಿಗೆಯಿಂದ ಯಾವುದೊಂದು ಪದಾರ್ಥದ ರುಚಿಯನ್ನು ತೆಗೆದುಕೊಳ್ಳುವುದು. ಇದಕ್ಕೆ ಆ ವಸ್ತುಗಳ ಪ್ರತ್ಯಕ್ಷಜ್ಞಾನ ಎಂಬ ಸಂಜ್ಞೆಯಿದೆ.

II ಹೊಗೆಯಿದ್ದಲ್ಲಿ ಅಗ್ನಿಯು ಇದ್ದಿರಲಿಕ್ಕೇಬೇಕೆಂದು ಅನುಮಾನದಿಂದ ತಿಳಿಯುತ್ತದೆ.

III ಲಂಡನ್‌ಪಟ್ಟಣದಲ್ಲಿ ಪಾರ್ಲಿಮೆಂಟ ಇದೆ; ಎಂಬುದು ಅಲ್ಲಿಗೆ ಹೋಗಿ, **ನೋಡಿ** ಬಂದವರ ಮುಖದಿಂದ ಎಂದರೆ ಆಪ್ತವಚನದಿಂದ ತಿಳಿಯುತ್ತದೆ.

ವನ್ನು ಕಾರಿದ್ದನ್ನು ಯಾರೂ ಎಂದೂ ನೋಡಿರುವುದಿಲ್ಲ. ಅನ್ನ, ಹೋಳಿಗೆ ಮುಂತಾದ ಜಡವಸ್ತುಗಳನ್ನು ತಿಂದು ಕಾರಿದಂತೆ ಜ್ಞಾನವನ್ನು ಕಾರುವುದು ಸರ್ವಥೈವ ಅಶಕ್ಯವಾಗಿರುತ್ತದೆಂದು ಇತ್ಯರ್ಥ. ಆದ್ದರಿಂದ ಯಾಜ್ಞವಲ್ಕ್ಯರು ಜ್ಞಾನವನ್ನು ಕಾರಿದರೆಂಬ ಸಂಗತಿ ಯಿಂದ ಪ್ರತ್ಯಕ್ಷವೆಂಬ ಪ್ರಮಾಣಕ್ಕೆ, ವಿರೋಧವು ಬರುತ್ತದೆ. ಅತಏವ ಈ ಆಖ್ಯಾಯಿಕೆಯು '**ಗುಣವಾದ**' ವಾಗಿರುತ್ತದೆಂಬುದು ಸಿದ್ಧ.

(೨) ಈ ಆಖ್ಯಾಯಿಕೆಯಲ್ಲಿ ಇತರ ಶಿಷ್ಯರೆಲ್ಲರೂ ತಿತ್ತಿರಿಪಕ್ಷಿ-ಗಳಾಗಿ, ಯಾಜ್ಞವಲ್ಕ್ಯರು ಕಾರಿದ ವೇದವನ್ನು ತಿಂದರೆಂದು ಹೇಳಿದ್ದಾರೆ. ಮನುಷ್ಯರು ಪಕ್ಷಿಗಳಾದದ್ದನ್ನು ಯಾರೂ ಎಂದೂ ನೋಡಿರುವುದಿಲ್ಲ. ಅರ್ಥಾತ್ ಮನುಷ್ಯರು ಹೋಗಿ, ಪಕ್ಷಿಯಾಗುವುದು ಸರ್ವಥೈವ ಅಶಕ್ಯವಾಗಿರುತ್ತದೆಂದು ಇತ್ಯರ್ಥ. ಮತ್ತು ಪಕ್ಷಿಗಳಾಗಲಿ ಮನುಷ್ಯರಾಗಲಿ ಇಲ್ಲವೆ ಇತರ ಯಾವ ಪ್ರಾಣಿಗಳೇ ಆಗಲಿ ಜ್ಞಾನವನ್ನು ತಿನ್ನುವುದನ್ನು ಯಾರೂ ಎಂದೂ ನೋಡಿರುವುದಿಲ್ಲ. ಅರ್ಥಾತ್ ಜ್ಞಾನವನ್ನು ತಿನ್ನುವುದು ಸರ್ವಥೈವ ಅಶಕ್ಯವಾಗಿರುತ್ತದೆಂದು ಇತ್ಯರ್ಥ. ಆದ್ದರಿಂದ ಇವೆರಡು ಸಂಗತಿಗಳಿಂದ ಪ್ರತ್ಯಕ್ಷವೆಂಬಪ್ರಮಾಣಕ್ಕೆ ವಿರೋಧವು ಬರುತ್ತದೆ. ಅರ್ಥಾತ್ ಈ ಆಖ್ಯಾಯಿಕೆಯು ಗುಣಾರ್ಥವಾದವಾಗಿರುತ್ತದೆಂಬುದು ಸಿದ್ಧ.

(೩) ಈ ಆಖ್ಯಾಯಿಕೆಯಲ್ಲಿ ಭಗವಾನ್ ಸೂರ್ಯನಾರಾಯಣನು ಕುದುರೆಯ ರೂಪವನ್ನು ಧಾರಣಮಾಡಿ, (ಎಂದರೆ ವಾಜಿರೂಪವನ್ನು ಧಾರಣಮಾಡಿ) ಯಾಜ್ಞವಲ್ಕ್ಯರಿಗೆ ಶುಕ್ಲಯಜುರ್ವೇದವನ್ನು ಉಪದೇಶ ಮಾಡಿದನು. ಎಂದು ಹೇಳಿದ್ದಾರೆ. ಕುದುರೆಯೇ ಆಗಲಿ ಮನುಷ್ಯೇತರ ಯಾವ ಪ್ರಾಣಿಗಳೇ ಆಗಲಿ ವೇದವನ್ನು ಎಂದರೆ ಜ್ಞಾನವನ್ನು ಉಪದೇಶಮಾಡುವುದನ್ನು ಯಾರೂ ಎಂದೂ ನೋಡಿರುವುದಿಲ್ಲ. ಅರ್ಥಾತ್ ಪಶುವು (ಕುದುರೆಯು) ಜ್ಞಾನವನ್ನು ಉಪದೇಶಮಾಡುವುದು ಸರ್ವಥೈವ ಅಶಕ್ಯವಾಗಿರುತ್ತದೆಂದು ಇತ್ಯರ್ಥ. ಆದ್ದರಿಂದ

ಕುದುರೆಯು ವೇದವನ್ನು ಉಪದೇಶಮಾಡಿತೆಂಬ ಸಂಗತಿಯಿಂದ ಪ್ರತ್ಯಕ್ಷವೆಂಬ ಪ್ರಮಾಣಕ್ಕೆ ವಿರೋಧವು ಬರುತ್ತದೆ. ಅತಏವ **ಈ** ಆಖ್ಯಾಯಿಕೆಯು ಗುಣಾರ್ಥವಾದವಾಗಿರುತ್ತದೆಂಬುದು ಸಿದ್ಧ.

(೪) ಪ್ರಾಚೀನಕಾಲದಲ್ಲಿ ಋಷಿಗಳು ತಮ್ಮ ಗಂಡುಮಕ್ಕಳಿಗೆ ಪಕ್ಷಿಗಳ ಹೆಸರನ್ನು ಇಡುತ್ತಿದ್ದರು. ಉದಾಹರಣಾರ್ಥವಾಗಿ **ಶುಕಮುನಿ, ಭರದ್ವಾಜ** ಋಷಿ-ಇತ್ಯಾದಿ. (ಶುಕ ಎಂದರೆ ಗಿಳಿ; ಭರದ್ವಾಜ ಎಂದರೆ ಸಂಬಾರಗಾಗೆ.) ಇದೇ ಮೇರೆಗೆ ತಿತ್ತಿರಿ ಪಕ್ಷಿಯ ಹೆಸರನ್ನು ಒಬ್ಬ ಋಷಿಪುತ್ರನಿಗೆ ಇಟ್ಟಿದ್ದರೆಂಬುದು ಮತ್ಸ್ಯಪುರಾಣದಿಂದಲೂ ವರಾಹ ಪುರಾಣದಿಂದಲೂ ಚೆನ್ನಾಗಿ ವ್ಯಕ್ತವಾಗುತ್ತದೆ. ವ್ಯಾಸ ಮಹರ್ಷಿಗಳು ಮತ್ಸ್ಯಪುರಾಣದಲ್ಲಿ ತಿತ್ತಿರಿಋಷಿಯ ಹೆಸರನ್ನು ಕಂಠೋಕ್ತವಾಗಿ ಹೀಗೆ ಹೇಳಿದ್ದಾರೆ:—

> **ತಿತ್ತಿರಿಃ** ಕಪಿಭೂಶ್ಚೈವ ಗಾರ್ಗಶ್ಚೈವ **ಮಹಾನೃಷಿಃ** ।
> ತ್ರ್ಯಾರ್ಷಯೋ ಹಿ ಮತಸ್ತೇಷಾಂ ಸರ್ವೇಷಾಂ ಪ್ರವರಃ ಶುಭಃ ॥ ೪೮ ॥
>
> ಅಙ್ಗಿರಾಸ್ತಿತ್ತಿರಿಶ್ಚೈವ ಕಪಿಭೂಶ್ಚ **ಮಹಾನೃಷಿಃ** ।
> ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೪೯ ॥

(ಅಧ್ಯಾಯ ೧೯೬)

ಇದೇಮೇರೆಗೆ ವರಾಹಪುರಾಣದಲ್ಲಿಯೂ **ಶುಕ**ಋಷಿಯ ಹೆಸರನ್ನೂ ಹಾಗೂ **ಭರದ್ವಾಜ**ಋಷಿಯ ಹೆಸರನ್ನೂ ಹಾಗೂ ತಿತ್ತಿರಿ ಋಷಿಯ ಮಗನಾದ **ತೈತ್ತಿರೀ**ಋಷಿಯ ಹೆಸರನ್ನೂ ಅಲ್ಲದೆ **ಆದಿತ್ಯ** ಋಷಿಯ ಹೆಸರನ್ನೂ ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ:—

> ತಪಶ್ಚಚಾರ ವಿಪುಲಂ **ಶುಕೋ** ವ್ಯಾಸಸುತೋ ಮಹಾನ್ !
> ಶ್ರೋತುಕಾಮಾಃ ಪುರಾಣಾನಿ ಸೇತಿಹಾಸಾನಿ ನೈಗಮಾಃ ॥ ೬೦ ॥

ಋಷಯಸ್ತತ್ರ ಚಾಜಗ್ಮುರಸಿತೋ ದೇವಲಸ್ತದಾ ।
ಮಾರ್ಕಣ್ಡೇಯೋ **ಭರದ್ವಾಜೋ** ಯವಕ್ರೀತಸ್ತತೋ
ಭೃಗುಃ ॥ ೬೧ ॥

ಅಙ್ಗಿರಾಸ್ತೈತ್ತಿರೀ ರೈಭ್ಯಃ ಕಾಣ್ವೋ ಮೇಧಾತಿಥಿಃ ಕೃತಃ
ತನ್ತುಃ ಸುತನ್ತು**ರಾದಿತ್ಯೋ** ವಸುಮಾನೇಕತೋ ದ್ವಿತಃ ॥ ೬೨ ॥
ವಾಮದೇವಶ್ಚಾಶ್ವಶಿರಾಸ್ತ್ರಿಶೀರ್ಷೋ ಗೌತಮೋದರಃ ।
ಅನ್ಯೇ ಚ ಸಿದ್ಧಾ ದೇವಾಶ್ಚ ಪನ್ನಗಾ ಗುಹ್ಯಕಾಸ್ತಥಾ ॥ ೬೩ ॥
( ವರಾಹಪುರಾಣ ಅ. ೧೬೦ )

ಅರ್ಥ:—ವ್ಯಾಸ ಸುತರಾದ **ಶುಕ**ಮುನಿಗಳು ಒಂದು ಸ್ಥಳದಲ್ಲಿ ಕಠಿಣ ತಪಸ್ಸನ್ನು ಆಚರಿಸುತ್ತಿದ್ದರು. ಅವರಿಂದ ಪುರಾಣ, ಇತಿಹಾಸ, ವೇದ ಮೊದಲಾದವುಗಳನ್ನು ಕೇಳುವ ಇಚ್ಛೆಯಿಂದ ಅಸಿತ, ದೇವಲ, ಮಾರ್ಕಣ್ಡೇಯ, **ಭರದ್ವಾಜ,** ಯವಕ್ರೀತ, ಭೃಗು, ಅಂಗಿರ, ತೈತ್ತಿರೀ, ರೈಭ್ಯ, ಕಾಣ್ವ ಮೇಧಾತಿಥಿ, ಕೃತ, ತಂತು, ಸುತಂತು, **ಆದಿತ್ಯ,** ವಸುಮಾನ, ವಾಮದೇವ, ಅಶ್ವಶಿರ, ತ್ರಿಶೀರ್ಷ, ಗೌತಮೋದರ ಮೊದಲಾದ ಋಷಿಗಳೂ ಮತ್ತು ಉಳಿದ ಸಿದ್ಧರೂ, ದೇವತೆಗಳೂ, ಪನ್ನಗರೂ, ಗುಹ್ಯಕರೂ ಕೂಡಿ, ಅವರ ಹತ್ತಿರ ಬಂದರು.

ಈ ಆಖ್ಯಾಯಿಕೆಯಲ್ಲಿ ಯಾಜ್ಞವಲ್ಕ್ಯರು ವೇದವನ್ನು ( ಎಂದರೆ ಜ್ಞಾನವನ್ನು ) ಕಾರಿದರೆಂದೂ ಹಾಗೂ ಆ ಕಾರಿಕೆಯ ರೂಪವಾದ ವೇದವನ್ನು ಇತರ ಶಿಷ್ಯರೆಲ್ಲರೂ ತಿತ್ತಿರಿಪಕ್ಷಿಯ ರೂಪವನ್ನು ಧರಿಸಿ ತಿಂದರೆಂದೂ ವ್ಯಾಸಮಹರ್ಷಿಗಳು ಹೇಳಿದ್ದನ್ನು ಹಿಂದೆಯೇ ನೋಡಿದ್ದೇವೆ. ಇವರೇ ಮತ್ಸ್ಯಪುರಾಣದಲ್ಲಿ ತಿತ್ತಿರಿಯು ಮಹರ್ಷಿಯಾಗಿದ್ದಾನೆಂದು ಹೇಳಿದ್ದಾರೆ. ಇದಲ್ಲದೆ ವರಾಹಪುರಾಣದಲ್ಲಿ ಈ ತಿತ್ತಿರಿಋಷಿಯ ಮಗನಾದ ತೈತ್ತಿರೀಋಷಿಯ ಹೆಸರನ್ನೂ ಕಂಠೋಕ್ತವಾಗಿ ಹೇಳಿದ್ದಾರೆ. (ಶ್ಲೋ. ೬೨ರಲ್ಲಿ) ಇದನ್ನು ಇದೇ ಈಗ ಹಿಂದೆಯೇ ನೋಡಿದ್ದೇವೆ. ಯಾಜ್ಞವಲ್ಕ್ಯರಿಂದ ಕೃಷ್ಣಯಜುರ್ವೇದವನ್ನು ಈ ತಿತ್ತಿರಿಋಷಿಯು ಕಲಿ

ತನೆಂಬುದನ್ನು ಮುಂದೆ ಸಶಾಸ್ತ್ರವಾಗಿ ಸಿದ್ಧಮಾಡುವವರಿದ್ದೇವೆ. ಇರಲಿ. 'ತಿತ್ತಿರಿ' ಎಂಬ ಋಷಿಯಿದ್ದನೆಂದು ವೇದವ್ಯಾಸರು ಹೇಳಿದ್ದಾರೆ. ಅತಏವ "ಶಿಷ್ಯರೆಲ್ಲರೂ ತಿತ್ತಿರಿಪಕ್ಷಿಯ ರೂಪವನ್ನು ಧರಿಸಿ, ವೇದವನ್ನುತಿಂದ ರೆಂಬ" ಸಂಗತಿಯಿಂದ ಪ್ರತ್ಯಕ್ಷಪ್ರಮಾಣಕ್ಕೂ ಆಗಮಪ್ರಮಾಣಕ್ಕೂ ವಿರೋಧವು ಬರುತ್ತದೆ. ಅರ್ಥಾತ್ ಈ ಆಖ್ಯಾಯಿಕೆಯು ಗುಣಾರ್ಥ ವಾದವೆಂಬುದು ಸಿದ್ಧ.

(೫) ಈ ಆಖ್ಯಾಯಿಕೆಯಲ್ಲಿ ಭಗವಾನ್ ಸೂರ್ಯನಾರಾಯಣನು ವಾಜಿರೂಪವನ್ನು ಧರಿಸಿ, ಎಂದರೆ ಕುದುರೆಯ ರೂಪವನ್ನು ಧರಿಸಿ, ಯಾಜ್ಞವಲ್ಕ್ಯರಿಗೆ ಶುಕ್ಲಯಜುರ್ವೇದವನ್ನು ಉಪದೇಶಮಾಡಿದನೆಂದು ಹೇಳಿದ್ದಾರೆ. ಕುದುರೆಯು ವೇದವನ್ನು ಎಂದರೆ ಜ್ಞಾನವನ್ನು ಉಪ ದೇಶಮಾಡಿದ್ದನ್ನು ಎಂದೂ ಯಾರೂ ನೋಡಿರುವುದಿಲ್ಲ. ಆದುದರಿಂದ ಈ ಸಂಗತಿಯಿಂದ ಪ್ರತ್ಯಕ್ಷ ಪ್ರಮಾಣಕ್ಕೆ ವಿರೋಧವು ಬರುತ್ತದೆಂದು ಹಿಂದೆಯೇ ಹೇಳಿದ್ದೇವೆ. ಇನ್ನು, "ವಾಜಿರೂಪವನ್ನು ಧರಿಸಿ" ಎಂಬು ದಕ್ಕೆ "ಕುದುರೆಯ ರೂಪವನ್ನು ಧರಿಸಿ" ಎಂದು ಅರ್ಥಮಾಡುವುದರಿಂದ ಆಗಮಪ್ರಮಾಣಕ್ಕೂ ವಿರೋಧವು ಬರುತ್ತದೆ. ಅದು ಹೇಗೆಂದರೆ, 'ವಾಜಿನ್' ಎಂಬ ಶಬ್ದಕ್ಕೆ ಕುದುರೆಯೆಂಬುದೊಂದೇ ಅರ್ಥವಿಲ್ಲ. ವಾಜಿನ್ ಎಂದರೆ ಆದಿತ್ಯ ಅಥವಾ ಸೂರ್ಯ ಎಂದೂ ಅರ್ಥವಿದೆ. ಇದಕ್ಕೆ ಪ್ರಮಾಣವೇನೆಂದರೆ, ಶ್ರೀಶಂಕರಾಚಾರ್ಯರು ತೈತ್ತಿರೀಯೋಪನಿಷತ್ತಿನ ಶಿಕ್ಷಾಧ್ಯಾಯದ ೧೦ನೆಯ ಅನುವಾಕದ ಪ್ರಾರಂಭದಲ್ಲಿದ್ದ 'ವಾಜಿನಿ' ಎಂಬ ಶಬ್ದಕ್ಕೆ ಭಾಷ್ಯವನ್ನು ಬರೆಯುವಾಗ್ಗೆ ಕಂಠೋಕ್ತವಾಗಿ ಹೀಗೆ ಹೇಳಿದ್ದಾರೆ:—"**ವಾಜಿನೀವ ವಾಜವತೀವ । ವಾಜಮನ್ನಂ ತದ್ವತಿ ಸವಿತರೀತ್ಯರ್ಥಃ** ।" ಎಂದರೆ ವಾಜಿನಿ+ಇವ=ವಾಜಿನೀವ; 'ವಾಜ' ಎಂದರೆ ಅನ್ನ, ಅದರಿಂದ ಯುಕ್ತನಾಗಿದ್ದಂಥ ವಾಜವಾನನಲ್ಲಿ ಎಂದರೆ ಸೂರ್ಯನಲ್ಲಿ ಎಂದು ಇತ್ಯರ್ಥ.

ಶ್ರೀಶಂಕರಾಚಾರ್ಯರ ಈ ತೈತ್ತಿರೀಯೋಪನಿಷದ್ಭಾಷ್ಯಕ್ಕೆ ಶ್ರೀಸುರೇಶ್ವರಾಚಾರ್ಯರು ವಾರ್ತಿಕವನ್ನು ಬರೆಯುವಾಗ್ಗೆ ಈ ಸಂದರ್ಭ

ದಲ್ಲಿ ಭಾಷ್ಯಕಾರರಂತೆಯೇ ವಾಜಿನ್ ಎಂದರೆ ಸೂರ್ಯ ಎಂದೇ ಅರ್ಥ ವನ್ನು ಹೀಗೆ ಮಾಡಿದ್ದಾರೆ:—

" **ವಾಜಮನ್ನಮಿತಿ ಜ್ಞೇಯಂ ತದ್ವತೀವ ದಿವಾಕರೇ** ॥ ೫೬ ॥

ಈ ಸಂದರ್ಭದಲ್ಲಿ ತೈತ್ತಿರೀಯೋಪನಿಷತ್ತಿಗೆ ಶ್ರೀಶಂಕರಾನಂದರು ಹೀಗೆ ದೀಪಿಕೆಯನ್ನು ಬರೆದಿದ್ದಾರೆ:—"**ವಾಜ** ಎಂದರೆ **ಗತಿ;** ಮತ್ತು '**ವಾಜೀ**' ಎಂದರೆ **ಗತಿಮಾನ್-ಆದಿತ್ಯ** (ಏಕೆಂದರೆ ಇವನು ಸರ್ವದಾ ಗಮನಮಾಡುತ್ತಿರುತ್ತಾನೆ.)

ಅತಏವ ಭಗವಾನ್ ಸೂರ್ಯನಾರಾಯಣನು ವಾಜಿರೂಪವನ್ನು ಧರಿಸಿದನು. ಎಂದರೆ ಆದಿತ್ಯಋಷಿಯ ರೂಪವನ್ನು ಧರಿಸಿದನೆಂದು ಇತ್ಯರ್ಥ.

ದ್ವಾಪರ ಯುಗದ ಆದಿಯಲ್ಲಿ ವೇದಗಳನ್ನು ಒಬ್ಬೊಬ್ಬ ಋಷಿಗೆ ಒಂದೊಂದರಂತೆ ವಿಭಾಗಮಾಡಿಕೊಡುವಾಗ್ಗೆ ಸಾಕ್ಷಾತ್ ಶ್ರೀಮನ್ನಾರಾಯಣನು ಹೇಗೆ ವೇದವ್ಯಾಸಋಷಿಯ ರೂಪವನ್ನು ಧಾರಣಮಾಡಿದನೋ, ಹಾಗೆಯೇ ಶುಕ್ಲಯಜುರ್ವೇದವನ್ನು ಯಾಜ್ಞವಲ್ಕ್ಯರಿಗೆ ಉಪದೇಶಮಾಡುವಾಗ್ಗೆ ಭಗವಾನ್ ಸೂರ್ಯನಾರಾಯಣನು ಆದಿತ್ಯ ಋಷಿಯ ರೂಪವನ್ನು ಧರಿಸಿದನು. ಎಂದು ಹೇಳುವುದು ಎಲ್ಲ ದೃಷ್ಟಿಯಿಂದಲೂ ಸಪ್ರಮಾಣವಾಗಿದೆ. ಹೇಗೆಂದರೆ, **ತಿತ್ತಿರಿಋಷಿಯು** ಮತ್ಸ್ಯಪುರಾಣದಲ್ಲಿ (ಅ. ೧೯೬, ಶ್ಲೋ. ೪೮ । ೪೯) ವರ್ಣಿತನಾಗಿದ್ದಂತೆಯೇ **ಆದಿತ್ಯಋಷಿಯು** ವರಾಹಪುರಾಣದಲ್ಲಿ (ಅ. ೧೭೦, ಶ್ಲೋ. ೬೨) ಕೀರ್ತಿತನಾಗಿದ್ದಾನೆ. ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಇದಲ್ಲದೆ ಕುದುರೆ, ತಿತ್ತಿರಿ ಪಕ್ಷಿಗಳು ಎಂದರೆ ಪಶುಪಕ್ಷಿಗಳು ವೇದಗಳನ್ನು ಉಪದೇಶಮಾಡುವುದು ಅಥವಾ ಅಧ್ಯಯನಮಾಡುವುದು, ಅಶಕ್ಯವಾದ ಸಂಗತಿಯಾಗಿರುತ್ತದೆ. ವೇದಗಳನ್ನು ಉಪದೇಶಮಾಡುವುದಕ್ಕೆ ಋಷಿಯೇ ಮಾತ್ರ ಸಮರ್ಥನು. ಇಷ್ಟೇ ಅಲ್ಲ, ಋಷಿಯೇ ವೇದಮಂತ್ರದ ದ್ರಷ್ಟಾ ಆಗಿದ್ದಾನೆಂಬುದು ವೇದಗಳ ಇತಿಹಾಸದಲ್ಲಿ ಸುಪ್ರಸಿದ್ಧವಾಗಿಯೇ ಇದೆ. ಅತಏವ

ಋಷಿಗಳಿಗೂ ವೇದಗಳಿಗೂ ಅತ್ಯಂತ ನಿಕಟಸಂಬಂಧವಿದೆ. ಕಿಂಬಹುನಾ ಪಾಣಿನಿ ಸೂತ್ರದಲ್ಲಿ (೩-೨-೧೮೬) "**ಕರ್ತರಿ ಚರ್ಷಿದೇವತಯೋಃ |**" ಎಂಬ ಸೂತ್ರಾರ್ಥದಲ್ಲಿ "**ಋಷಿರ್ವೇದಮನ್ತ್ರಃ**" ಎಂದು ಇದೆ. ಅರ್ಥಾತ್ ಋಷಿಎಂದರೆ ವೇದಮನ್ತ್ರ ಎಂಬುದಾಗಿ ಅರ್ಥವಾಗುವಷ್ಟು ಋಷಿಗೂ ವೇದಕ್ಕೂ ತಾದಾತ್ಮ್ಯವಾಗಿದೆ; ಎಂದರೆ ಏಕರೂಪತೆಯಾಗಿಹೋಗಿದೆ.

ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ, ಕೃಷ್ಣಜುರ್ವೇದ ವನ್ನು ತಿತ್ತಿರಿ ಋಷಿಯೂ; ಹಾಗೂ ಶುಕ್ಲಯಜುರ್ವೇದವನ್ನು ಆದಿತ್ಯ ಋಷಿಯೂ (ಅಧ್ಯಯನಮಾಡಿ) ಉಪದೇಶಮಾಡಿದರೇ ಹೊರತು ತಿತ್ತಿರಿ ಪಕ್ಷಿಯಾಗಲಿ ಕುದುರೆಯಾಗಲಿ ಉಪದೇಶಮಾಡಲಿಲ್ಲ, ಎಂಬುದು ಸಿದ್ಧ.

ಈ ಪ್ರಕಾರ ಪ್ರತ್ಯಕ್ಷ ಪ್ರಮಾಣಕ್ಕೂ ಆಗಮ ಪ್ರಮಾಣಕ್ಕೂ ತಿತ್ತಿರಿ ಪಕ್ಷಿ, ಕುದುರೆ (=ವಾಜೀ) ಎಂಬ ಎರಡು ಶಬ್ದಗಳಿಂದ ವಿರೋಧವು ಬರುತ್ತದೆ. ಆದುದರಿಂದ ಈ ಆಖ್ಯಾಯಿಕೆಯು ಗುಣವಾದಾತ್ಮಕವಾದದ್ದೆಂಬುದು ಸಿದ್ಧ.

(೬) ಮಹಾತಪೋನಿಧಿಗಳಾದ ವೇದವ್ಯಾಸರು ಈ ಆಖ್ಯಾಯಿಕೆಯ ಪ್ರಾರಂಭದಲ್ಲಿ (ಶ್ಲೋ. ೧) "ವೈಶಂಪಾಯನರು **ಮಹಾಜ್ಞಾನಿಗಳು** (=ಮಹಾಮತಿಃ)" ಎಂದು ಹೇಳಿದ್ದಾರೆ. ಆದರೆ ಮುಂದೆ ಈ ಆಖ್ಯಾಯಿಕೆಯಲ್ಲಿ—"ವೈಶಂಪಾಯನರು ಸಭೆಯ ನಿಯಮಕ್ಕನುಸರಿಸಿ ಮೇರು ಪರ್ವತದ ಮೇಲಿನ ಸಭೆಗೆ ಹೋಗದೆ, 'ಬ್ರಹ್ಮಹತ್ಯಾ' ಪಾಪದಂಥ ಮಹಾಪಾತಕಕ್ಕೆ ಗುರಿಯಾದರು." ಎಂದು ಹೇಳಿದ್ದಾರೆ. ಮಹಾಜ್ಞಾನಿಗಳಾದ ವೈಶಂಪಾಯನರು ಇಂಥ ಪ್ರಮಾದವನ್ನು ಎಂದೆಂದಿಗೂ ಮಾಡಲಾರರು. ಅರ್ಥಾತ್ ಈ 'ಬ್ರಹ್ಮಹತ್ಯಾ' ಕಥೆಯಿಂದ ಅನುಮಾನ ಪ್ರಮಾಣಕ್ಕೂ ಆಗಮಪ್ರಮಾಣಕ್ಕೂ ವಿರೋಧವು ಬರುತ್ತದೆ. ಅತಏವ ಈ ಆಖ್ಯಾಯಿಕೆಯು ಗುಣಾರ್ಥವಾದವೆಂಬುದು ಸಿದ್ಧ.

(೭) ವ್ಯಾಸಮಹರ್ಷಿಗಳು ಈ ಆಖ್ಯಾಯಿಕೆಯ ಪ್ರಾರಂಭದಲ್ಲಿ(ಶ್ಲೋ. ೨) "ಯಾಜ್ಞವಲ್ಕ್ಯರು **ಪರಮಧರ್ಮಜ್ಞರು** (=ಪರಮಧರ್ಮಜ್ಞಃ)"

ಎಂದು ಹೇಳಿದ್ದಾರೆ. ಆದರೆ ಮುಂದೆ ಈ ಆಖ್ಯಾಯಿಕೆಯಲ್ಲಿ—"ಯಾಜ್ಞವಲ್ಕ್ಯರು ಇತರ ಶಿಷ್ಯರನ್ನು ಅಲ್ಪತೇಜಸ್ವಿಗಳೆಂದು ಸಂಬೋಧಿಸಿ, ಅವರನ್ನು ಹೀಯಾಳಿಸಿದರು." ಎಂದು ಹೇಳಿದ್ದಾರೆ. ಪರಮಧರ್ಮಜ್ಞರಾದ ಯಾಜ್ಞವಲ್ಕ್ಯರು ಇಂಥ ಪ್ರಮಾದವನ್ನು ಎಂದೆಂದಿಗೂ ಮಾಡಲಾರರು. ಅರ್ಥಾತ್ "ಯಾಜ್ಞವಲ್ಕ್ಯರು ಇತರ ಶಿಷ್ಯರನ್ನು ಅಲ್ಪತೇಜಸ್ವಿಗಳೆಂದು ಸಂಬೋಧಿಸಿ, ಅವರನ್ನು ಹೀಯಾಳಿಸಿದರು." ಎಂಬ ಸಂಗತಿಯಿಂದ ಅನುಮಾನಪ್ರಮಾಣಕ್ಕೂ ಆಗಮಪ್ರಮಾಣಕ್ಕೂ ವಿರೋಧವು ಬರುತ್ತದೆ. ಆದ್ದರಿಂದ ಈ ಆಖ್ಯಾಯಿಕೆಯು ಗುಣಾರ್ಥವಾದವೆಂಬುದು ಸಿದ್ಧ.

(೮) ವ್ಯಾಸಮಹಾಮುನಿಗಳು ಈ ಆಖ್ಯಾಯಿಕೆಯ ಪ್ರಾರಂಭದಲ್ಲಿ (ಶ್ಲೋ. ೨) "ಯಾಜ್ಞವಲ್ಕ್ಯರು ಗುರುಗಳ ಸೇವೆಯಲ್ಲಿ ನಿರಂತರ ದಕ್ಷರಾಗಿದ್ದರು. (=ಗುರುವೃತ್ತಿಪರಃಸದಾ)" ಎಂದು ಹೇಳಿದ್ದಾರೆ. ಆದರೆ ಮುಂದೆ ಈ ಆಖ್ಯಾಯಿಕೆಯಲ್ಲಿ— "ಯಾಜ್ಞವಲ್ಕ್ಯರು ಗುರುಗಳ ಆಜ್ಞೆಯನ್ನು ಮುರಿದರು." ಎಂದು ಹೇಳಿದ್ದಾರೆ. ಗುರುಗಳ ಸೇವೆಯಲ್ಲಿ ನಿರಂತರ ದಕ್ಷರಾಗಿದ್ದಂಥ ಯಾಜ್ಞವಲ್ಕ್ಯರು ಇಂಥ ಪ್ರಮಾದವನ್ನು ಎಂದೆಂದಿಗೂ ಮಾಡಲಾರರು. ಅರ್ಥಾತ್ "ಯಾಜ್ಞವಲ್ಕ್ಯರು ಗುರುಗಳ ಆಜ್ಞೆಯನ್ನು ಮುರಿದರು." ಎಂಬ ಸಂಗತಿಯಿಂದ ಅನುಮಾನಪ್ರಮಾಣಕ್ಕೂ ಆಗಮಪ್ರಮಾಣಕ್ಕೂ ವಿರೋಧವು ಬರುತ್ತದೆ. ಆದುದರಿಂದಲೇ ಈ ಆಖ್ಯಾಯಿಕೆಯು ಗುಣಾರ್ಥವಾದವೆಂಬುದು ಸಿದ್ಧ.

ಇಷ್ಟೆಲ್ಲ ಲಕ್ಷಣಗಳಿಂದ ಈ ಆಖ್ಯಾಯಿಕೆಯು ಗುಣಾರ್ಥವಾದವಾಗಿರುತ್ತದೆಂಬುದು ಸ್ಪಷ್ಟವಾಗಿ ಸಿದ್ಧವಾಯಿತು.

ಇನ್ನು ಈ ಗುಣಾರ್ಥವಾದಾತ್ಮಕ ಆಖ್ಯಾಯಿಕೆಯಲ್ಲಿ, ಲಾಕ್ಷಣಿಕ ಅರ್ಥವನ್ನು ಹೇಗೆ ಕಂಡುಹಿಡಿಯಬೇಕೆಂಬ ರೀತಿಯನ್ನು ಮೀಮಾಂಸಾ ಶಾಸ್ತ್ರದಲ್ಲಿ ಉದಾಹರಣದೊಡನೆ ವಿಶದ ಮಾಡಿ ಹೀಗೆ ಹೇಳಿದ್ದಾರೆ:—

**"ಯಥಾ 'ಆದಿತ್ಯೋಯೂಪ' ಇತ್ಯಾದಿ। ಯೂಪೇ ಆದಿತ್ಯಾಭೇದಸ್ಯ ಪ್ರತ್ಯಕ್ಷ ಬಾಧಿತತ್ವಾತ್ ಆದಿತ್ಯವತ್ ಉಜ್ಜ್ವಲತ್ವರೂಪ**

**ಗುಣೋಽನೇನ ಲಕ್ಷಣಯಾ ಪ್ರತಿಪಾದ್ಯತೇ।''** ಎಂದು ಅರ್ಥಸಂಗ್ರಹವೆಂಬ ಮೀಮಾಂಸಾ ಗ್ರಂಥದ ೧೨೪ನೆಯ ಪ್ರತೀಕದಲ್ಲಿ ಹೇಳಿದ್ದಾರೆ. ಇದರ ಅರ್ಥವೇನೆಂದರೆ, ''ಆದಿತ್ಯೋ ಯೂಪಃ' ಇದರಲ್ಲಿಯ ''ಯೂಪೇ ಆದಿತ್ಯಾಭೇದಃ'' ಎಂಬ ಮುಖ್ಯಾರ್ಥವು ಪ್ರತ್ಯಕ್ಷವೆಂಬ ಪ್ರಮಾಣದಿಂದ ಬಾಧಿತವಾಗುತ್ತದೆ. ಏಕೆಂದರೆ, 'ಯೂಪ' ಎಂದರೆ ಪಶುವನ್ನು ಕಟ್ಟುವ ಸ್ತಂಭವಾಗಿದೆ. ಯೂಪವನ್ನು ಪ್ರತ್ಯಕ್ಷ ಆದಿತ್ಯನೆಂದು ಎಂದರೆ ಸೂರ್ಯನೆಂದು ಹೇಳಿದ್ದಾಗಿದೆ. ಅರ್ಥಾತ್ ಯೂಪವು ಮತ್ತು ಸೂರ್ಯನು ಅಭಿನ್ನರೆಂದು ರೂಪಕಾತ್ಮಕ ವರ್ಣನ ಮಾಡಿದ್ದಾಗಿದೆ. ಆದರೆ ಈ ವರ್ಣನೆಯು ಪ್ರತ್ಯಕ್ಷ ಪ್ರಮಾಣದಿಂದ ಬಾಧಿತವಾಗುತ್ತದೆ. ಏಕೆಂದರೆ ಯೂಪವು ಮತ್ತು ಸೂರ್ಯನು ಇವರು ಒಂದೇ ಆಗುವುದು ಸರ್ವಥೈವ ಅಶಕ್ಯವಾಗಿದೆ. ಹಾಗಾದರೆ ಈ ವರ್ಣನೆಯ ವಿವಕ್ಷಿತ ಅರ್ಥವನ್ನು ಹೇಗೆ ಕಂಡುಹಿಡಿಯಬೇಕು? ಗುಣಸಾದೃಶ್ಯದಿಂದ ಇದರ ಲಾಕ್ಷಣಿಕ ಅರ್ಥವನ್ನು ಕಂಡುಹಿಡಿಯತಕ್ಕದ್ದು. ಹೇಗೆಂದರೆ, ಸೂರ್ಯನಲ್ಲಿ ಹೇಗೆ ಉಜ್ಜ್ವಲತ್ವ ರೂಪವಾದ ಗುಣವಿದೆಯೋ, ಹಾಗೆಯೇ ಯೂಪದಲ್ಲಿ ಉಜ್ಜ್ವಲತ್ವ ರೂಪವಾದ ಗುಣವಿದೆ. ಸಾರಾಂಶ ಇವರಿಬ್ಬರಲ್ಲಿ ಉಜ್ಜ್ವಲತ್ವವೆಂಬ ಗುಣಸಾದೃಶ್ಯವಿದೆ. ಅತಏವ ಈ ಉಜ್ಜ್ವಲತ್ವ ದೃಷ್ಟಿಯಿಂದ ಯೂಪವನ್ನು ಸೂರ್ಯನೆಂದು ವರ್ಣನಮಾಡಿದ್ದಾಗಿದೆಂದು ಇತ್ಯರ್ಥ. ಈ ವಿವಕ್ಷಿತ ಅರ್ಥವು ಗುಣಸಾದೃಶ್ಯದಿಂದ ನಿಷ್ಪನ್ನವಾಗುತ್ತಿರುವುದರಿಂದ ಈ ಅರ್ಥವಾದಕ್ಕೆ ಗುಣವಾದ ಅಥವಾ ಗುಣಾರ್ಥವಾದವೆಂಬ ಹೆಸರು ಪ್ರಾಪ್ತವಾಗಿದೆ.

ಇದೇ ರೀತಿಯಿಂದ ವಿಷ್ಣುಪುರಾಣದೊಳಗಿನ ಈ ಆಖ್ಯಾಯಿಕೆಯ ವಿವಕ್ಷಿತ ಅರ್ಥವನ್ನು ಕಂಡುಹಿಡಿಯುವಾ,

(೧) '' ಕೃಷ್ಣಯಜುರ್ವೇದವು ಅವ್ಯವಸ್ಥಿತವಾಗಿ ಮಿಶ್ರವಾಗಿರುವುದರಿಂದ ಹಾಗೂ ಇದೇ ಮೇರೆಗೆ ಕಾರಿಕೆಯು ಅವ್ಯವಸ್ಥಿತ ಮಿಶ್ರವಾಗಿರುವುದರಿಂದ ಅರ್ಥಾತ್ ಇವೆರಡರಲ್ಲಿ ಅವ್ಯವಸ್ಥಿತ ಮಿಶ್ರತ್ವ ರೂಪ

ವಾದ ಗುಣಸಾದೃಶ್ಯವಿದ್ದುದರಿಂದ ಶ್ರೀವೇದವ್ಯಾಸ ಮಹರ್ಷಿಗಳು ಈ ಕೃಷ್ಣಯಜುರ್ವೇದಕ್ಕೆ ಕಾರಿಕೆಯ ರೂಪವನ್ನು ಕೊಟ್ಟು, ಗುಣಾರ್ಥ ಮಾದಾತ್ಮಕವಾದ ಒಂದು ಆಖ್ಯಾಯಿಕೆಯನ್ನು ರಚಿಸಿ, ವಿಷ್ಣುಪುರಾಣ ದಲ್ಲಿ ಹೇಳಿದ್ದಾರೆ. " ಎಂಬುದನ್ನು ಹಿಂದೆಯೇ ಸಪ್ರಮಾಣವಾಗಿ ವಿವೇ ಚಿಸಿದ್ದೇವೆ.

(೨) ಕೃಷ್ಣಯಜುರ್ವೇದಕ್ಕೂ ಕಾರಿಕೆಗೂ ಗುಣಸಾದೃಶ್ಯವಿದ್ದಂತೆ ಕಾರುವುದಕ್ಕೂ ಪಾಠಪ್ರವಚನ ಹೇಳುವುದಕ್ಕೂ ಗುಣಸಾದೃಶ್ಯವಿದೆ. ಹೇಗೆಂದರೆ, ಹೊಟ್ಟೆಯೊಳಗೆ ಹೋಗಿದ್ದ ಪದಾರ್ಥವನ್ನು ಕಾರುವುದು; ಎಂದರೆ ಬಾಯಿಯಿಂದ ಹೊರಗೆ ಹಾಕುವುದು. ಇದೇ ಮೇರೆಗೆ ತಮ್ಮ ಹೊಟ್ಟೆಯೊಳಗೆ* ಹೋಗಿದ್ದ ವಿದ್ಯೆಯನ್ನು ಶಿಷ್ಯರಿಗೆ ಪಾಠಪ್ರವಚನ ಹೇಳುವುದು; ಎಂದರೆ ಆ ವಿದ್ಯೆಯನ್ನು ಬಾಯಿಯಿಂದ ಹೊರಗೆ ಹಾಕು ವುದು.

'ಗುಣ' ಎಂಬ ಶಬ್ದಕ್ಕೆ "ಕಾರ್ಯ ಅಥವಾ ಪರಿಣಾಮ" ಎಂದು ಅರ್ಥವಿದೆ. (ಕಿರಾತಾರ್ಜುನೀಯ ಸರ್ಗ ೬, ಶ್ಲೋ. ೭. ಶಾಕುಂತಲ ಅಂಕ

---

* ಪ್ರಾಚೀನ ಭಾರತೀಯ ಪಂಡಿತರು ವಿದ್ಯೆಯು ಹೊಟ್ಟೆಯಲ್ಲಿ ಇರುತ್ತ ದೆಂದು ತಿಳಿದುಕೊಂಡಿದ್ದರು. "ನಿರಕ್ಷರ ಕುಕ್ಷಿಃ" ಎಂಬ ಸಂಸ್ಕೃತ ವಾಕ್ಪ್ರ ಚಾರವು, ಈ ಭಾವನೆಗೆ ಸಾಕ್ಷ್ಯವಾಗಿದೆ. "ನಿರಕ್ಷರ ಕುಕ್ಷಿಃ" ಎಂದರೆ ಹೊಟ್ಟೆಯಲ್ಲಿ ಅಕ್ಷರವಿಲ್ಲದವನು; ಅತಏವ ವಿದ್ಯಾವಿಹೀನನೆಂದು ಇತ್ಯರ್ಥ. ಇದೇ ಪ್ರಕಾರ "ಜ್ಞಾನಾಮೃತಂ ಭೋಜನಮ್" ಎಂಬ ಸಂಸ್ಕೃತ ಶ್ಲೋಕಾಂತರ್ಗತ ವಚನ ದಲ್ಲಿಯೂ ಕೂಡ ವಿದ್ಯೆಯು ಹೊಟ್ಟೆಯಲ್ಲಿರುತ್ತವೆಂಬ ಅರ್ಥವೇ ಧ್ವನಿತವಾಗಿದೆ. ಹಾಗೆಯೇ "ವ್ಯಾಸೋಚ್ಛಿಷ್ಟಂ ಜಗತ್ಸರ್ವಂ" ಎಂಬ ಸಂಸ್ಕೃತ ನಾಣ್ಣುಡಿಯೂ ಸಹ ಇದೇ ಅರ್ಥವನ್ನೇ ಸೂಚಿಸುತ್ತದೆ. ಕಿಂಬಹುನಾ "ನಿಮ್ಮ ಹೊಟ್ಟೆಯೊಳ ಗಿನ ವಿದ್ಯೆಯನ್ನು ಇವನ ಹೊಟ್ಟೆಯೊಳಗೆ ಹಾಕಿರಿ." ಎಂದೆನ್ನುವ ವಾಕ್ಸಂಪ್ರ ದಾಯವೇ ನಮ್ಮ ಭಾರತೀಯರಲ್ಲಿ ರೂಢವಾಗಿ ಹೋಗಿದೆ. ಇರಲಿ.

ವಿದ್ಯೆಯು ಹೊಟ್ಟೆಯೊಳಗೆ ಇರುತ್ತದೆಂದೇ ತಿಳಿದುಕೊಂಡಿರಲಿ; ಅಥವಾ ತಲೆಯಲ್ಲಿ ಮಿದುಳಿನಲ್ಲಿ ಇರುತ್ತದೆಂದೇ ತಿಳಿದುಕೊಂಡಿರಲಿ. ದೇಹದಲ್ಲಿ ವಿದ್ಯೆ ಯಿರುತ್ತದೆಂಬುದು ಸರ್ವಮಾನ್ಯವಾಗಿರುತ್ತದೆ ಸಾಕು.

೭, ಶ್ಲೋ. ೪.) ಎಂದರೆ ಕಾರುವುದೂ ಹಾಗೂ ಪಾಠಪ್ರವಚನ ಹೇಳು ವುದೂ ಕಾರ್ಯತಃ ಅಥವಾ ಪರಿಣಾಮತಃ ಒಂದೇ ಆಗಿರುತ್ತದೆಂದು ಇತ್ಯರ್ಥ. ಅತಏವ ಕಾರುವುದಕ್ಕೂ, ಪಾಠಪ್ರವಚನ ಹೇಳುವುದಕ್ಕೂ— ಗುಣಸಾದೃಶ್ಯವಿರುತ್ತದೆಂಬುದು ಸಿದ್ಧ. ಸಾರಾಂಶ ಯಾಜ್ಞವಲ್ಕ್ಯರು ವೇದವನ್ನು ಕಾರಿದರು; ಎಂದರೆ ಯಾಜ್ಞವಲ್ಕ್ಯರು ಶಿಷ್ಯರಿಗೆ ವೇದದ ಪಾಠಪ್ರವಚನ ಹೇಳಿದರೆಂಬುದೇ ಇದರ ಗರ್ಭಿತಾರ್ಥವಾಗಿದೆ.

(೩) ಇದೇ ಮೇರೆಗೆ ತಿನ್ನುವ, ಉಣ್ಣುವ, ಕುಡಿಯುವ ಪದಾರ್ಥ ಗಳನ್ನು ಭಕ್ಷಣದಿಂದಲೂ ಪಾನದಿಂದಲೂ ಒಡಲೊಳಗೆ (ದೇಹದಲ್ಲಿ ಹೊಟ್ಟೆಯೊಳಗೆ) ಸೇರಿಸಿಕೊಳ್ಳುವುದೂ, ಮತ್ತು ವಿದ್ಯೆಯನ್ನು ಎಂದರೆ ಜ್ಞಾನವನ್ನು ಶ್ರವಣದಿಂದಲೂ ವಾಚನದಿಂದಲೂ ಒಡಲೊಳಗೆ (ದೇಹ ದಲ್ಲಿ—ತಲೆಯಲ್ಲಿ ಮಿದುಳಿನಲ್ಲಿ ಅಥವಾ ಹೊಟ್ಟೆಯಲ್ಲಿ) ಸೇರಿಕೊಳ್ಳು ವುದೂ ಕಾರ್ಯತಃ ಅಥವಾ ಪರಿಣಾಮತಃ ಒಂದೇ ಆಗಿದೆ. ಆದು ದರಿಂದ ಪದಾರ್ಥಗಳನ್ನು ತಿನ್ನುವುದಕ್ಕೂ ವಿದ್ಯೆಯನ್ನು ಗ್ರಹಿಸುವು ದಕ್ಕೂ ಗುಣಸಾದೃಶ್ಯವಿರುತ್ತದೆಂಬುದು ಸಿದ್ಧ. ಸಾರಾಂಶ, ಯಾಜ್ಞ ವಲ್ಕ್ಯರು ಕಾರಿದ ವೇದವನ್ನು ಶಿಷ್ಯರೆಲ್ಲರೂ ತಿತ್ತಿರಿ ಪಕ್ಷಿಯಾಗಿ ತಿಂದರು; ಎಂದರೆ ಯಾಜ್ಞವಲ್ಕ್ಯರ ಹೊಟ್ಟೆಯೊಳಗಿನ ವೇದವು ತಿತ್ತಿರಿ ಮೊದ ಲಾದ ಶಿಷ್ಯರ ಹೊಟ್ಟೆಯೊಳಗೆ ಹೋಯಿತೆಂದು ಇತ್ಯರ್ಥ. ಎಂದರೆ ಯಾಜ್ಞವಲ್ಕ್ಯರು ತಿತ್ತಿರಿ ಪ್ರಭೃತಿ ಶಿಷ್ಯರಿಗೆ ವೇದವನ್ನು ಕಲಿಸಿದರೆಂ ಬುದು ಇದರ ಗರ್ಭಿತಾರ್ಥವು.

(೪) ಇದೇ ಪ್ರಕಾರ ವೈಶಂಪಾಯನರು, ಯಾಜ್ಞವಲ್ಕ್ಯರನ್ನು ಕುರಿತು "ನನ್ನಿಂದ ನೀನು ಅಧ್ಯಯನ ಮಾಡಿದ ವೇದವನ್ನು ನನಗೆ ತಿರುಗಿಕೊಡು" ಎಂದು ಕೇಳುವುದೂ ಮತ್ತು "ನಾನು ನಿನಗೆ ಕೊಟ್ಟ ವೇದರೂಪವಾದ ಋಣವನ್ನು ಎಂದರೆ ಋಷಿಋಣವನ್ನು ಅಥವಾ ಒಂದು ದೃಷ್ಟಿಯಿಂದ ಪಿತೃಋಣವನ್ನು[೧೦] ನನಗೆ ತಿರುಗಿಕೊಡು" ಎಂದು ಕೇಳು

---

೧೦ ವೇದಪ್ರದಾನಾದಾಚಾರ್ಯಂ ಪಿತರಂ ಪರಿಚಕ್ಷತೇ ।
(ಮನುಸ್ಮೃತಿ ಅ. ೨, ಶ್ಲೋ.೧೭೧)

ವುದೂ ಕಾರ್ಯತಃ ಒಂದೇ ಆಗಿದೆ. ಇಷ್ಟು ಮಾತ್ರವೇ ಅಲ್ಲ ವಸ್ತುತಃ ಒಂದೇ ಆಗಿದೆ. ಆದ್ದರಿಂದ "ನನ್ನಿಂದ ಕಲಿತ ವಿದ್ಯೆಯನ್ನು ತಿರುಗಿ ಕೊಡು;" ಎಂದೆನ್ನುವುದಕ್ಕೂ, ಹಾಗೂ "ನಾನು ಕೊಟ್ಟ ವಿದ್ಯಾ ರೂಪವಾದ ಋಣವನ್ನು ಎಂದರೆ ಋಷಿಋಣವನ್ನು ಅಥವಾ ಒಂದು ದೃಷ್ಟಿಯಿಂದ ಪಿತೃಋಣವನ್ನು ತಿರುಗಿಕೊಡು" ಎಂದೆನ್ನುವುದಕ್ಕೂ ಗುಣಸಾದೃಶ್ಯವಿರುತ್ತದೆಂಬುದು ಸಿದ್ಧ.

[ಋಷಿಋಣವನ್ನು ತಿರುಗಿ ಕೊಡುವುದೆಂದರೆ, ಗೃಹಸ್ಥಾಶ್ರಮ ವನ್ನು ಸ್ವೀಕರಿಸಿದ ಬಳಿಕ ಕ್ಷತ್ರಿಯರು, ವೈಶ್ಯರು ತಾವು ಬ್ರಹ್ಮ ಚಾರಿಯಾಗಿದ್ದಾಗ್ಗೆ ಅಧ್ಯಯನಮಾಡಿದ ವೇದವನ್ನು ಪುನಃ ಪುನಃ ಪಠನ ಮಾಡುತ್ತಿರುವುದು. ಆದರೆ ಬ್ರಾಹ್ಮಣರು ಮಾತ್ರ ವೇದಾಧ್ಯಯನವನ್ನು ಮಾಡುವುದಲ್ಲದೆ ವೇದಾಧ್ಯಾಪನ ಕಾರ್ಯವನ್ನು ಕೈಕೊಂಡು, ಬ್ರಹ್ಮಚಾರಿಗಳಿಗೆ ವೇದವನ್ನು ಕಲಿಸಿ, ಶಿಷ್ಯರನ್ನು ನಿರ್ಮಾಣ ಮಾಡುವುದು. ಎಂದರೆ ತಮ್ಮ ಗುರುಗಳಿಗೆ ಪ್ರತಿಶಿಷ್ಯರನ್ನು ನಿರ್ಮಾಣ ಮಾಡಿಕೊಡುವುದು. ಹೀಗೆ ಋಷಿಋಣವನ್ನು ಕೊಡುವುದರಲ್ಲಿ ತಾರ ತಮ್ಯವೇಕೆಂದರೆ, ಕ್ಷತ್ರಿಯರಿಗೆ ವೈಶ್ಯರಿಗೆ ಇಲ್ಲದ '**ಅಧ್ಯಾಪನ**' ಎಂಬ ವಿಶೇಷ ಅಧಿಕಾರವು ಬ್ರಾಹ್ಮಣರಿಗೆ ಮಾತ್ರ ಇದೆ. ಆದುದರಿಂದಲೇ ತೈತ್ತಿರೀಯ ಸಂಹಿತೆಯಲ್ಲಿ (ಕಾಂಡ ೬, ಪ್ರಪಾಠಕ ೩, ಅನುವಾಕ ೧೦, ಕಂಡಿಕಾ ೫೫) ಬ್ರಾಹ್ಮಣರನ್ನು ಅನುಲಕ್ಷಿಸಿ ಹೀಗೆ ಉಕ್ತವಾಗಿದೆ:—

**"ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ ಋಣವಾ-**
**ಜಾಯತೇ**
**ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ**
**ಪ್ರಜಯಾ ಪಿತೃಭ್ಯ**
**ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ**
**ಬ್ರಹ್ಮಚಾರಿವಾಸೀ "**

ಎಂದರೆ ಬ್ರಾಹ್ಮಣ ಜನ್ಮವನ್ನು ಹೊಂದಿದ ಕೂಡಲೇ ಎಂದರೆ ಗುರುಕುಲದಲ್ಲಿ ವೇದಶಾಸ್ತ್ರಾಧ್ಯಯನವನ್ನು ಸಂಪೂರ್ಣಮಾಡಿ,

ಅಲ್ಲಿಂದ ಹೊರಗೆ ಬಂದು ಗೃಹಸ್ಥಾಶ್ರಮವನ್ನು ಸ್ವೀಕರಿಸಿದ ಕೂಡಲೇ ಋಷಿಋಣ, ದೇವಋಣ, ಪಿತೃಋಣ ಎಂಬ ಮೂರು ಋಣಗಳು ಪ್ರಾಪ್ತವಾಗುತ್ತವೆ. ಬ್ರಾಹ್ಮಣನು ಈ ಮೂರು ಋಣಗಳಿಂದ ಮುಕ್ತನಾಗುವ ಮಾರ್ಗಗಳು ಯಾವುವೆಂದರೆ:— (೧) "ಬ್ರಹ್ಮಚರ್ಯೇಣ ಋಷಿಭ್ಯಃ" ಎಂದರೆ ಬ್ರಹ್ಮಚಾರಿಯಿಂದ ಅರ್ಥಾತ್ ವೇದಾಭ್ಯಾಸಮಾಡುವ ಶಿಷ್ಯನಿಂದ ಸಾರಾಂಶ ವೇದಾಭ್ಯಾಸ ಮಾಡುವ ಶಿಷ್ಯರನ್ನು ನಿರ್ಮಾಣಮಾಡುವುದರಿಂದ ಋಷಿಋಣದಿಂದ ಬ್ರಾಹ್ಮಣನು ಮುಕ್ತನಾಗುತ್ತಾನೆ. (೨) "ಯಜ್ಞೇನ ದೇವೇಭ್ಯಃ" ಎಂದರೆ ಯಜ್ಞವನ್ನು ಮಾಡಿ, ಹವಿಸ್ಸನ್ನು ದೇವತೆಗಳಿಗೆ ಅರ್ಪಿಸುವುದರಿಂದ ದೇವಋಣದಿಂದ ಬ್ರಾಹ್ಮಣನು ಮುಕ್ತನಾಗುತ್ತಾನೆ. (೩) "ಪ್ರಜಯಾ ಪಿತೃಭ್ಯಃ" ಎಂದರೆ ಸಂತತಿಯಿಂದ ಅರ್ಥಾತ್ ಗಂಡುಮಕ್ಕಳನ್ನು ಹಡೆದು, ಆ ಗಂಡು ಸಂತತಿಯಿಂದ ಪಿತೃಋಣದಿಂದ ಬ್ರಾಹ್ಮಣನು ಮುಕ್ತನಾಗುತ್ತಾನೆ. ಇತ್ಯರ್ಥವೇನೆಂದರೆ ಯಾವ ಬ್ರಾಹ್ಮಣನು ಪುತ್ರವಾನನಾಗಿದ್ದಾನೆಯೋ, ಮತ್ತು ಯಥಾವಿಧಿಯಾಗಿ ಯಜ್ಞವನ್ನು ಮಾಡುತ್ತಾನೆಯೋ, ಯಜ್ಞವನ್ನು ಮಾಡಿಸುತ್ತಾನೆಯೋ, ಹಾಗೂ ಬ್ರಹ್ಮಚಾರಿಗಳಿಂದ ಎಂದರೆ ವೇದಾಭ್ಯಾಸ ಮಾಡುವ ಶಿಷ್ಯರಿಂದ ಯುಕ್ತನಾಗಿ ವಾಸಮಾಡುತ್ತಾನೆಯೋ[೧] ಆ ಬ್ರಾಹ್ಮಣನು ಪಿತೃ, ದೇವ, ಋಷಿಗಳ ಋಣಗಳಿಂದ ಮುಕ್ತನಾಗುತ್ತಾನೆ. ]

(ಉತ್ಪಾದಕನು ಎಂದರೆ ಜನ್ಮವನ್ನು ಕೊಟ್ಟವನು ಹೇಗೆ ತಂದೆಯೋ ಹಾಗೆಯೇ ಜ್ಞಾನದಾತೃವಾದ ಗುರುವೂ ಸಹ ತಂದೆಯಾಗಿದ್ದಾನೆಂದು ಮನುಸ್ಮೃತಿಯಲ್ಲಿ (ಅ. ೨, ಶ್ಲೋ. ೧೪೬.) ಘಂಟಾಘೋಷವಾಗಿ ಹೇಳಿದೆ. ಹಾಗೆಯೇ ಮನುಸ್ಮೃತಿಯಲ್ಲಿ (ಅ. ೨, ಶ್ಲೋ. ೧೫೧) ಶಿಷ್ಯರನ್ನು ಪುತ್ರರೆಂದು ಸಂಬೋಧಿಸಿದ್ದಾಗಿದೆ. ಆದ್ದರಿಂದ ಋಷಿಋಣವನ್ನು, ಎಂದರೆ ಗುರುವಿನ ಋಣವನ್ನು ಪಿತೃಋಣದಂತೆ ಶಿಷ್ಯರೆಂಬ ಪುತ್ರ

---

[೧] ಬ್ರಹ್ಮಚಾರಿಭಿಃ ಸಹ ವಸತೀತಿ ಬ್ರಹ್ಮಚಾರಿವಾಸೀ

ರನ್ನು ನಿರ್ಮಾಣಮಾಡಿ ತೀರಿಸುವುದು ಕರ್ತವ್ಯಕರ್ಮವೆಂದು ಇತ್ಯರ್ಥ. )

(೫) ಪರಮ ಧರ್ಮಜ್ಞರೆಂದೂ, ನಿರಂತರ ಗುರುಸೇವೆಯಲ್ಲಿ ದಕ್ಷರಾದವರೆಂದೂ, ವೈಶಂಪಾಯನರ ಶಿಷ್ಯರೆಂದೂ **ಯಾಜ್ಞವಲ್ಕ್ಯರೊಬ್ಬರನ್ನೇ** ಸ್ತುತಿಸಿರುವುದರಿಂದಲೂ ಮತ್ತು ಋಷಿಋಣವನ್ನು ತೀರಿಸೆಂದು ಎಂದರೆ ಶಿಷ್ಯರನ್ನು ನಿರ್ಮಾಣಮಾಡಿ, ಶಾಖಾಪ್ರವರ್ತಕನಾಗೆಂದು ವೈಶಂಪಾಯನರು **ಯಾಜ್ಞವಲ್ಕ್ಯರೊಬ್ಬರಿಗೇನೇ** ಆಜ್ಞಾಪಿಸಿರುವುದರಿಂದಲೂ ವೈಶಂಪಾಯನರಿಗೆ ಯಾಜ್ಞವಲ್ಕ್ಯರು ಒಬ್ಬರೇ ಒಬ್ಬರು ಶಿಷ್ಯರಿದ್ದರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಆದ್ದರಿಂದ ಮೇಲಿನ ಈ ಎರಡು ಮಾತುಗಳಲ್ಲಿ ಶಿಷ್ಯೈಕತ್ವರೂಪವಾದ ಗುಣಸಾದೃಶ್ಯವಿರುತ್ತದೆಂಬುದು ಸಿದ್ಧ.

ಈ ೫ ಗುಣಸಾದೃಶ್ಯಗಳಿಂದ ನಿಷ್ಪನ್ನವಾಗುವ ಲಾಕ್ಷಣಿಕ ಅರ್ಥವೇನೆಂದರೆ, ಯಾಜ್ಞವಲ್ಕ್ಯರೊಬ್ಬರೇ ಈ ಕೃಷ್ಣಯಜುರ್ವೇದವನ್ನು ವೈಶಂಪಾಯನ ಗುರುಗಳಿಂದ ಅಧ್ಯಯನ ಮಾಡಿ, ತರುವಾಯ ಈ ಯಾಜ್ಞವಲ್ಕ್ಯರು ಈ ಕೃಷ್ಣಯಜುರ್ವೇದವನ್ನು ತಿತ್ತಿರಿ ಋಷಿ ಮೊದಲಾದ ಶಿಷ್ಯರಿಗೆ ಕಲಿಸಿ, ತೈತ್ತಿರೀಯ ಶಾಖಾ ಮುಂತಾದ ೮೬ ಶಾಖೆಗಳನ್ನು೧೨ ಏರ್ಪಡಿಸಿದರೆಂಬುದೇ ಈ ಆಖ್ಯಾಯಿಕೆಯ ವಿವಕ್ಷಿತಾರ್ಥವಾಗಿದೆ.

---

೧೨ ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳಿರುತ್ತವೆಂದು ಚರಣವ್ಯೂಹಗ್ರಂಥದಲ್ಲಿ ಉಕ್ತವಾಗಿದೆ. ಈಗ ಕೃಷ್ಣಯಜುವೇದದಲ್ಲಿ ತೈತ್ತಿರೀಯ, ಕಠ, ಮೈತ್ರಾಯಣೀಯ ಅಥವಾ ಕಾಲಾಪ ಎಂಬ ಮೂರೇ ಶಾಖೆಗಳು ಮಾತ್ರ ಉಪಲಬ್ಧವಾಗಿರುತ್ತವೆ. ತೈತ್ತಿರೀಯ ಶಾಖೆಯ ಸಂಹಿತೆಯಂತೆಯೇ ಕಠ, ಮೈತ್ರಾಯಣೀಯ ಶಾಖೆಗಳ ಸಂಹಿತೆಗಳೂ ಸಹ ಬ್ರಾಹ್ಮಣದಿಂದ ಮಿಶ್ರವಾಗಿವೆ. ಮೇಲೆ **ಹೇಳಿದ ಈ ಆಖ್ಯಾಯಿಕೆಯಲ್ಲಿ ತೈತ್ತಿರೀಯ ಶಾಖೆಯನ್ನು ಹೇಳಿರುವುದು, ಕೃಷ್ಣಯಜುರ್ವೇದದ ಸರ್ವಶಾಖೆಗಳ ಉಪಲಕ್ಷಣಾರ್ಥವಾಗಿ ಇರುತ್ತದೆ. ಆತಏವ ತೈತ್ತಿರೀಯ, ಕಠ, ಮೈತ್ರಾಯಣೀಯ ಪ್ರಭೃತಿ ಕೃಷ್ಣಯಜುರ್ವೇದದ ಎಲ್ಲ ಶಾಖೆಗಳನ್ನು**

ಆ ಬಳಿಕ ಈ ಯಾಜ್ಞವಲ್ಕ್ಯರೊಬ್ಬರೇ ಭಗವಾನ್ ಸೂರ್ಯನಾರಾಯಣನ ಅವತಾರನಾದ ಆದಿತ್ಯಋಷಿಯ ಬಳಿಯಲ್ಲಿ ಶುಕ್ಲಯಜುರ್ವೇದವನ್ನು ಅಧ್ಯಯನ ಮಾಡಿ, ತದನಂತರ ಅದನ್ನು ಕಣ್ವ, ಮಧ್ಯಂದಿನ ಪ್ರಭೃತಿ ೧೫ ಜನ ಶಿಷ್ಯರಿಗೆ ಕಲಿಸಿ, ೧೫ ಶಾಖೆಗಳನ್ನು ಏರ್ಪಡಿಸಿದರೆಂಬುದೇ ಈ ೫ನೆಯ ಅಧ್ಯಾಯದ ಉತ್ತರಾರ್ಧದ ಇತ್ಯರ್ಥವಾಗಿದೆ.

ಪುರಾಣಗಳಂತೂ ವಿಶೇಷತಃ ಮಂದಮತಿಗಳಿಗೋಸ್ಕರವಾಗಿ ನಿರ್ಮಾಣವಾಗಿರುತ್ತವೆ. ಆದ್ದರಿಂದ ಈ ಪುರಾಣಗಳಲ್ಲಿ ಇಂಥ ಆಖ್ಯಾಯಿಕೆಗಳು, ಅರ್ಥವಾದಗಳು, ರೂಪಕಗಳು ಹೇರಳವಾಗಿವೆ. ಇಷ್ಟೇ ಅಲ್ಲ ಇವುಗಳಿಗೆಲ್ಲ ಪವಾಡ ( =Miracle )ದ ವೇಷವನ್ನು ಹಾಕಿ, ಈ ಕಥೆಗಳಿಗೆ ಅದ್ಭುತರಮ್ಯತೆಯನ್ನುಂಟುಮಾಡಿದ್ದಾರೆ. ಇದೇನೂ ಆಶ್ಚರ್ಯಪಡತಕ್ಕ ಸಂಗತಿಯಲ್ಲ. ಏಕೆಂದರೆ, ಮಂದಮತಿಗಳ ಮನಸ್ಸಿಗೆ ಪುರಾಣಗಳನ್ನು ಆಕರ್ಷಕವಾಗುವಂತೆ ಹೀಗೆ ಮಾಡುವುದು ಸ್ವಾಭಾವಿಕವಾಗಿದೆ.

ಆದರೆ ತತ್ತ್ವಜ್ಞಾನಪೂರ್ಣವಾದ ಉಪನಿಷತ್ತುಗಳಲ್ಲಿ ಸಹ ಇಂಥ ಆಖ್ಯಾಯಿಕೆಗಳು, ಅರ್ಥವಾದಗಳು ಇವೆ. ಇಂಥ ಪ್ರೌಢಗ್ರಂಥಗಳಲ್ಲಿ ಇವು ಯಾಕೆ ಇರುತ್ತವೆಂಬುದನ್ನು ಶ್ರೀಶಂಕರಾಚಾರ್ಯರು ಐತರೇಯೋಪನಿಷದ್ಭಾಷ್ಯದಲ್ಲಿ ಬಹು ಸಮರ್ಪಕವಾಗಿ ಹೇಳಿದ್ದಾರೆ. ಎಂದರೆ ಐತರೇಯೋಪನಿಷತ್ತಿನ ೪ ನೆಯ ಅಧ್ಯಾಯದಲ್ಲಿ ಗುಣಾರ್ಥವಾದದ ವಾಕ್ಯಗಳಿದ್ದುದರಿಂದ ಈ ಸಂದರ್ಭದಲ್ಲಿ ಅರ್ಥವಾದ, ಆಖ್ಯಾಯಿಕೆಗಳ ಬಗ್ಗೆ ೫ ನೆಯ ಅಧ್ಯಾಯದ ೧ನೇಯ ಖಂಡದಲ್ಲಿ ಹೀಗೆ ಸುಂದರವಾಗಿ ನಿರೂಪಿಸಿದ್ದಾರೆ:—

ಉದಾಹರಣಾರ್ಥವಾಗಿ ಮೊದಲು ನಾಲ್ಕನೆಯ ಅಧ್ಯಾಯದಲ್ಲಿದ್ದ ಗುಣಾರ್ಥವಾದದ ಒಂದೆರಡು ವಾಕ್ಯಗಳನ್ನು ವಿವರಿಸಿ, ಆ ಬಳಿಕ ಈ

---

ಯಾಜ್ಞವಲ್ಕ್ಯರೇ ಏರ್ಪಡಿಸಿದರೆಂಬುದು ಇತ್ಯರ್ಥ. ಸಾರಾಂಶ ಯಾಜ್ಞವಲ್ಕ್ಯರು ಕೃಷ್ಣಯಜುರ್ವೇದದ ಮತ್ತು ಶುಕ್ಲಯಜುರ್ವೇದದ ಈ ಎರಡೂ ಯಜುರ್ವೇದಗಳ ಶಾಖಾಪ್ರವರ್ತಕ ಋಷಿಗಳೆಂಬುದು ಸಿದ್ಧ.

ವಿಷಯದಬಗ್ಗೆ ಶ್ರೀಶಂಕರಾಚಾರ್ಯರು ವ್ಯಕ್ತಪಡಿಸಿದ ಅಭಿಪ್ರಾಯ ವನ್ನು ಹೇಳುವಾ.

(೧) (ಮನುಷ್ಯನು ಮಣ್ಣು, ಕಟ್ಟಿಗೆ ಮುಂತಾದ ಉಪಾದಾನ ಕಾರಣಗಳಿಂದ ಎಂದರೆ ಘಟಕದ್ರವ್ಯಗಳಿಂದ ಘಟ, ಸ್ತಂಭ ಇತ್ಯಾದಿ ಗಳನ್ನು ಮಾಡುತ್ತಾನೆಂಬುದನ್ನು ನಾವು ಪ್ರತ್ಯಕ್ಷ ವ್ಯವಹಾರದಲ್ಲಿ ನೋಡು ತ್ತೇವೆ. ಆದರೆ) **"ಅನುಪಾದಾಯ ಕಿಂಚಿತ್ ಲೋಕಾನ್ ಅಸೃಜತ"** ಎಂದರೆ ಯಾವಪ್ರಕಾರದ್ದೂ ಉಪಾದಾನವನ್ನು (=ಘಟಕದ್ರವ್ಯವನ್ನು) ತೆಗೆದುಕೊಳ್ಳದೆ, ಲೋಕಗಳನ್ನು ಉತ್ಪನ್ನಮಾಡುವವನಾದನು. ಎಂಬುದು ಪ್ರತ್ಯಕ್ಷವೆಂಬ ಪ್ರಮಾಣದಿಂದ ಬಾಧಿತವಾಗಿದೆ.

(೨) **"ಸೃಷ್ಟಸ್ಯ ಅನ್ನಸ್ಯ ಪಲಾಯನಂ"** (ಎಂದರೆ ಉತ್ಪನ್ನ ಮಾಡಿದ ಅನ್ನವು ಓಡಿ ಹೋಗುವುದು.) ಹೀಗಾಗುವುದು ಸರ್ವಥೈವ ಅಶಕ್ಯವಾಗಿದೆ, ಏಕೆಂದರೆ ಅನ್ನವು ಅಚೇತನವಾಗಿದೆ.

"ಹೀಗಿದ್ದಮೇಲೆ ಈ ಸರ್ಗ ಉಪನಿಷತ್ತು ಅಪ್ರಮಾಣವಾಗಿದೆ?" **"ಅಸ್ತು ತರ್ಹಿಸರ್ಗಮೇವೇದಮನುಪಪನ್ನಮ್** । (ಈ ಎಲ್ಲ ವರ್ಣ ನೆಯೂ ಅಶಕ್ಯವೂ ಅಸಂಭವನೀಯವೂ ಆಗಿದೆ. ಎಂಬ ಪೂರ್ವಪಕ್ಷವನ್ನು ಮಾಡಿ, ಶ್ರೀಶಂಕರಾಚಾರ್ಯರು ಹೀಗೆ ಹೇಳಿದ್ದಾರೆ.) "**ನ। ಅತ್ರಾತ್ಮಾವಬೋಧಾರ್ಥಮಾತ್ರಸ್ಯ ವಿವಕ್ಷಿತತ್ವಾತ್ ಸರ್ವೋಽ ಯಮರ್ಥವಾದ ಇತ್ಯದೋಷಃ**।" ಅರ್ಥ:-ಹಾಗೆ ಇಲ್ಲ. ಈ ಅಧ್ಯಾಯದಲ್ಲಿ ಕೇವಲ ಪರಮಾತ್ಮನ ಅವಬೋಧವು ಎಂದರೆ ಜ್ಞಾನವು ವಿವಕ್ಷಿತವಾಗಿದ್ದುದರಿಂದ ಮೇಲಿನ ಸರ್ಗ ವರ್ಣನೆಯು ಅರ್ಥವಾದ ವಾಗಿರುತ್ತದೆ. ಆದ್ದರಿಂದ ಈ ವರ್ಣನೆಯಲ್ಲಿ ಯಾವದೋಷವೂ ಇಲ್ಲ.

ಪರಮಾತ್ಮನ ಅವಬೋಧವೇ ಎಂದರೆ ಜ್ಞಾನವೇ ವಿವಕ್ಷಿತ ವಾಗಿದ್ದ ಪಕ್ಷದಲ್ಲಿ ಈ ಆತ್ಮಜ್ಞಾನವನ್ನೇ ಸಾಕ್ಷಾತ್ ವರ್ಣನಮಾಡು ವುದು ಯಥೋಚಿತವಾಗಿದೆ.—ಹೀಗೆ ಮಾಡುವುದನ್ನು ಬಿಟ್ಟು, ಮಿಕ್ಕ ಈ ನಿಷ್ಕಾರಣ ಅರ್ಥವಾದ, ಆಖ್ಯಾಯಿಕಾದಿ ಕಥಾ ಪ್ರಪಂಚವನ್ನು

ಏತಕ್ಕೆ ಹೇಳಿದರು ? ಎಂಬ ಪೂರ್ವಪಕ್ಷವನ್ನು ಮಾಡಿ, ಶ್ರೀಶಂಕರಾಚಾರ್ಯರು ಹೀಗೆ ಹೇಳಿದ್ದಾರೆ:— "**ಸುಖಾವಬೋಧನ ಪ್ರತಿಪತ್ತ್ಯರ್ಥಂ ಲೋಕವದಾಖ್ಯಾಯಿಕಾದಿ ಪ್ರಪಞ್ಚ ಇತಿ ಯುಕ್ತತರಃಪಕ್ಷಃ**"

ಅರ್ಥ:—ಸುಖದಿಂದ ಎಂದರೆ ಅನಾಯಾಸದಿಂದ ಜ್ಞಾನಪ್ರಾಪ್ತಿಯನ್ನು ಮಾಡಿಕೊಳ್ಳುವುದಕ್ಕೋಸ್ಕರ ಹಾಗೂ ಅನಾಯಾಸದಿಂದ ಜ್ಞಾನವನ್ನು ಪ್ರತಿಪಾದನ ಮಾಡುವುದಕ್ಕೋಸ್ಕರ ಎಂದರೆ ಶ್ರೋತೃಗಳಿಗೆ ಅನಾಯಾಸದಿಂದ ಜ್ಞಾನದ ಬೋಧವಾಗಬೇಕು; ಹಾಗೂ ಉಪದೇಶಕನಿಗೆ ಅನಾಯಾಸದಿಂದ ಆತ್ಮಜ್ಞಾನವನ್ನು ಪ್ರತಿಪಾದನ ಮಾಡುವುದಕ್ಕೆ ಬರಬೇಕು; ಎಂಬ ಉದ್ದೇಶಕ್ಕೋಸ್ಕರ ವ್ಯವಹಾರಜ್ಞ ಜನರಂತೆ ಅರ್ಥವಾದ, ಆಖ್ಯಾಯಿಕಾದಿ ಪ್ರಪಂಚವನ್ನು ಹೇಳಿದ್ದಾಗಿದೆ. ಹೀಗೆ ಹೇಳಿರುವುದು ಅತಿಶಯ ಯುಕ್ತಪಕ್ಷವಾಗಿದೆ. ಇರಲಿ.

ಇನ್ನು ಹಿಂದೆ ಹೇಳಿದ ವಿಷ್ಣುಪುರಾಣೋಕ್ತ ಈ ಆಖ್ಯಾಯಿಕೆಯು ಒಂದು ರೂಪಕವೇ ಆಗಿದೆ. ಈ ರೂಪಕದ ( ಎಂದರೆ ನಾಟಕದ ) ವಸ್ತುವಿನಲ್ಲಿ ಬೀಜ, ಬಿಂದು, ಪತಾಕಾ, ಪ್ರಕರೀ, ಫಲಗಳೆಂಬ ಐದು ಅರ್ಥಪ್ರಕೃತಿಗಳನ್ನು ಭರತನ ನಾಟ್ಯಶಾಸ್ತ್ರದ ಪ್ರಕಾರ ವಿಂಗಡಿಸಿ ತೋರಿಸುವಾ.

ಯಾಜ್ಞವಲ್ಕ್ಯರೊಬ್ಬರೇ ವೈಶಂಪಾಯನ ಗುರುಗಳಿಂದ ಕೃಷ್ಣ ಯಜುರ್ವೇದವನ್ನು ಅಧ್ಯಯನ ಮಾಡಿ, ತದನಂತರ ಗುರುಗಳ ಆಜ್ಞೆಯ ಪ್ರಕಾರ ಯಾಜ್ಞವಲ್ಕ್ಯರು ಈ ವೇದವನ್ನು ತಿತ್ತಿರಿ ಋಷಿ ಪ್ರಭೃತಿ ಶಿಷ್ಯರಿಗೆ ಕಲಿಸಿದರೆಂಬುದು ಈ ಆಖ್ಯಾಯಿಕೆಯ ವಿವಕ್ಷಿತಾರ್ಥವಾಗಿದ್ದು, ಇದೇ ಈ ರೂಪಕದ **ಬೀಜವಾಗಿದೆ.** ಈ ಬೀಜದಿಂದಲೇ ಈ ರೂಪಕವೆಂಬ ವೃಕ್ಷವು ನಿರ್ಮಾಣವಾಗಿದೆ. ಎಂದರೆ ಈ ವಿವಕ್ಷಿತಾರ್ಥವೆಂಬ ಐತಿಹಾಸಿಕ ಸತ್ಯದ ತಳಹದಿಯ ಮೇಲೆಯೇ ಈ ರೂಪಕವೆಂಬ ಮಂದಿರವನ್ನು ಕಟ್ಟಿದ್ದಾಗಿದೆ.

ತಿತ್ತಿರಿ ಋಷಿಯು ಇದ್ದನೆಂಬುದೂ ಹಾಗೂ ಕೃಷ್ಣಯಜುರ್ವೇದವು, ಕಾರಿಕೆಯೋಪಾದಿಯಲ್ಲಿ ಅವ್ಯವಸ್ಥಿತ ಮಿಶ್ರವಾಗಿರುತ್ತದೆಂಬುದೂ ಬಲವತ್ತರವಾದ ಪ್ರಮಾಣಗಳಿಂದ ಸಿದ್ಧವಾದದ್ದನ್ನು ಹಿಂದೆಯೇ ನೋಡಿದ್ದೇವೆ. ಅರ್ಥಾತ್ ಕೃಷ್ಣಯಜುರ್ವೇದವು ಕಾರಿಕೆಯನ್ನು ಹೋಲುತ್ತಿರುವುದರಿಂದಲೇ ಯಾಜ್ಞವಲ್ಕ್ಯರು ಈ ಕೃಷ್ಣಯಜುರ್ವೇದವನ್ನು ಕಾರಿದರೆಂದೂ ಆ ಕಾರಿಕೆಯನ್ನು ಶಿಷ್ಯರು ತಿತ್ತಿರಿ ಪಕ್ಷಿಯಾಗಿ ತಿಂದರೆಂದೂ ಪ್ರಾಸಂಗಿಕ ವೃತ್ತಾಂತವನ್ನು ಕಲ್ಪಿಸಿಕೊಳ್ಳಲೇಬೇಕಾಯಿತು. ಈ ಪ್ರಾಸಂಗಿಕ ವೃತ್ತಾಂತಕ್ಕೆ '**ಪ್ರಕರೀ**' ಎಂದು ಹೆಸರು.

ಯಾಜ್ಞವಲ್ಕ್ಯರ ಹೊಟ್ಟೆಯೊಳಗಿನ ವಿದ್ಯೆಯು ಎಂದರೆ ವೇದವು ತಿತ್ತಿರಿ ಋಷಿ ಪ್ರಭೃತಿ ಶಿಷ್ಯರ ಹೊಟ್ಟೆಯೊಳಗೆ ಹೋಯಿತೆಂಬುದು ಈ ಪ್ರಕರಿಯ ತಾತ್ಪರ್ಯ. ಎಂದರೆ, ಯಾಜ್ಞವಲ್ಕ್ಯರು ತಿತ್ತಿರಿ ಮೊದಲಾದ ಶಿಷ್ಯರಿಗೆ ಈ ಕೃಷ್ಣಯಜುರ್ವೇದವನ್ನು ಕಲಿಸಿದರೆಂಬುದನ್ನು ಗರ್ಭಿತ ರೀತಿಯಿಂದ ಹೇಳಿದ್ದಾರೆಂದು ಇತ್ಯರ್ಥ. ಸಾರಾಂಶ ಯಾಜ್ಞವಲ್ಕ್ಯರು ಕೃಷ್ಣಯಜುರ್ವೇದದ ಶಾಖಾಪ್ರವರ್ತಕ ಋಷಿಗಳೆಂಬುದೇ ಈ ರೂಪಕದ ಫಲಿತಾರ್ಥವಾಗಿದೆ.

ಈ ಪ್ರಕರಿಯೆಂಬ ಅರ್ಥಪ್ರಕೃತಿಗೆ ಅನುರೂಪವಾಗಿ ಎಂದರೆ ಯಾಜ್ಞವಲ್ಕ್ಯರಿಂದ ಈ ವೇದವನ್ನು ಕಾರಿಸುವ ಕಲ್ಪನೆಗೆ ಪೋಷಕವಾಗುವಹಾಗೆ ಕಾರಿಸುವುದಕ್ಕೆ ಕಾರಣವು ಬೇಕಾದ್ದರಿಂದ "ವೈಶಂಪಾಯನ ಗುರುಗಳು ತಮ್ಮ ಶಿಷ್ಯರಾದ ಯಾಜ್ಞವಲ್ಕ್ಯರ ಮೇಲೆ ಸಿಟ್ಟಾದರು." ಎಂಬುದನ್ನು ಕಲ್ಪಿಸಿಕೊಂಡ ಹೊರತು ಗತ್ಯಂತರವಿಲ್ಲದಂತಾಯಿತು. ಆದುದರಿಂದಲೇ ಸಿಟ್ಟುಬರುವುದಕ್ಕೆ ನಿಮಿತ್ತವಾಗುವಹಾಗೆ ಬ್ರಹ್ಮಹತ್ಯಾಪಾಪಘಟನೆಯ ಉಪಕಥೆಯೊಂದನ್ನು ಕಲ್ಪಿಸಿಕೊಂಡಿದ್ದಾರೆ. ಈ ಉಪಕಥೆಗೆ ನಾಟ್ಯಶಾಸ್ತ್ರದ ಪರಿಭಾಷೆಯಲ್ಲಿ "**ಪತಾಕಾ**" ಎಂದು ಹೆಸರು. ಈ ಪತಾಕೆಯು ಕಲ್ಪಿತ ಕಥೆಯೆಂಬುದನ್ನು (ಎಂದರೆ ವೈಶಂಪಾಯನರಿಗೆ ಬ್ರಹ್ಮಹತ್ಯಾದೋಷವು ಬಂದದ್ದೂ ಸುಳ್ಳು; ಯಾಜ್ಞವಲ್ಕ್ಯರು

ಇತರ ಬ್ರಾಹ್ಮಣರಿಗೆ, ಅಲ್ಪ ತೇಜಸ್ವಿಗಳೆಂದು ಸಂಬೋಧಿಸಿ, ಅವರನ್ನು ಹೀಯಾಳಿಸಿದ್ದೂ ಸುಳ್ಳು; ಆಜ್ಞಾಭಂಗಮಾಡಿದ್ದೂ ಸುಳ್ಳು; ಮತ್ತು ವೈಶಂಪಾಯನರು ಯಾಜ್ಞವಲ್ಕ್ಯರಮೇಲೆ ಸಿಟ್ಟಾದದ್ದೂ ಸುಳ್ಳೆಂಬುದನ್ನು ಹಿಂದೆಯೇ ಸಪ್ರಮಾಣವಾಗಿ ಸಿದ್ಧಮಾಡಿದ್ದೇವೆ.

ಈ ಕಲ್ಪಿತವಾದ ಪತಾಕೆ, ಪ್ರಕರಿಗಳಿಂದ ವ್ಯಕ್ತವಾದದ್ದೇನೆಂದರೆ, ಕೃಷ್ಣಯಜುರ್ವೇದವು, ಕಾರಿಕೆಯಂತೆ ಅವ್ಯವಸ್ಥಿತ ಮಿಶ್ರವಾಗಿದ್ದು, ಈ ವೇದವನ್ನು ಯಾಜ್ಞಲ್ಕ್ಯರು ವೈಶಂಪಾಯನ ಗುರುಗಳಿಂದ ಅಧ್ಯಯನಮಾಡಿ, ಇದನ್ನು ತಿತ್ತಿರಿ ಪ್ರಭೃತಿ ಶಿಷ್ಯರಿಗೆ ಕಲಿಸಿದರೆಂಬುದುಸಿದ್ಧ.

ವೈಶಂಪಾಯನ ಋಷಿಗಳು ಯಾಜ್ಞವಲ್ಕ್ಯರೊಬ್ಬರಿಗೇನೇ ಕೃಷ್ಣ ಯಜುರ್ವೇದವನ್ನು ಅಧ್ಯಯನ ಮಾಡಿಸಿ, ಈ ಯಾಜ್ಞವಲ್ಕ್ಯರನ್ನೇ ಕೃಷ್ಣಯಜುರ್ವೇದದ ಶಾಖಾಪ್ರವರ್ತಕರನ್ನಾಗಿ ಹೇಗೆ ಮಾಡಿದ್ದಾರೆಯೋ, ಹಾಗೆಯೇ ಆದಿತ್ಯಋಷಿಗಳೂ ಸಹ ಶುಕ್ಲಯಜುರ್ವೇದವನ್ನು ಯಾಜ್ಞವಲ್ಕ್ಯರೊಬ್ಬರಿಗೇನೇ ಕಲಿಸಿ, ಈ ಯಾಜ್ಞವಲ್ಕ್ಯರನ್ನೇ ಶುಕ್ಲಯಜುರ್ವೇದದ ಶಾಖಾಪ್ರವರ್ತಕರನ್ನಾಗಿಮಾಡಿದ್ದಾರೆಂಬುದು ವಿಷ್ಣುಪುರಾಣದಲ್ಲಿ ಉಕ್ತವಾದದ್ದನ್ನು ಹಿಂದೆಯೇ ನೋಡಿದ್ದೇವೆ. ವೈಶಂಪಾಯನ ಋಷಿಗಳೂ ಹಾಗೂ ಆದಿತ್ಯಋಷಿಗಳೂ ಈ ಉಭಯ ಋಷಿವರ್ಯರು ಪೈಲ, ಜೈಮಿನಿ, ಸುಮಂತು ಋಷಿಗಳಂತೆ ಸ್ವತಃ ತಾವೇ ಶಾಖಾ ಪ್ರವರ್ತಕರಾಗದೆ, ಯಾಜ್ಞವಲ್ಕ್ಯರನ್ನೇ ಕೃಷ್ಣ, ಶುಕ್ಲ ಈ ಎರಡೂ ಯಜುರ್ವೇದಗಳ ಶಾಖಾಪ್ರವರ್ತಕರನ್ನಾಗಿ ಯಾಕೆ ಮಾಡಿದರೆಂಬುದನ್ನು ಇದೇ ಅಧ್ಯಾಯಬಲ್ಲಿ ಮುಂದೆ ಸಪ್ರಮಾಣವಾಗಿ ವಿವೇಚಿಸುವವರಿದ್ದೇವೆ. ಇರಲಿ.

ಇನ್ನು, ಬಿಂದು ಮತ್ತು ಫಲ ಇವುಗಳ ವಿಷಯವನ್ನು ಕುರಿತು ಸ್ವಲ್ಪ ವಿವೇಚಿಸಿ, ಈ ಅರ್ಥಪ್ರಕೃತಿಗಳ ಪ್ರತಿಪಾದನೆಯನ್ನು ಮುಗಿಸುವಾ.

ಈ ಪತಾಕಾ ಮತ್ತು ಪ್ರಕರೀ ಇವುಗಳ ಭರದಲ್ಲಿ ಮೂಲ ಕಥಾ ಪ್ರವಾಹವು ಎರಡನೆಯ ಕಡೆಗೆ ವ್ಯರ್ಥ ಹರಿದುಹೋಗಬಾರದೆಂದು

ಅದನ್ನು ಮೂಲಕಥೆಯ ಕೇಂದ್ರದ ಕಡೆಗೆ ತಂದು ಜೋಡಿಸುವುದಕ್ಕೆ ಎಂದರೆ ಜೋಡಿಸುವ ಕ್ರಿಯೆಗೆ '**ಬಿಂದು**' ಎಂಬ ಹೆಸರು. ಪತಾಕೆ ಯಲ್ಲಿ—ವೈಶಂಪಾಯನರು ಯಾಜ್ಞವಲ್ಕ್ಯರ ಮೇಲೆ ಸಿಟ್ಟಾದರೆಂಬು ದನ್ನು ಕಲ್ಪಿಸಿ, ಆ ಕಾಲ್ಪನಿಕ ಸಿಟ್ಟಿನ ಪ್ರವಾಹವನ್ನು ಬೇರೆ ಕಡೆಗೆ ಎಲ್ಲಿಯೂ ವ್ಯರ್ಥ ಹರಿದುಹೋಗಗೊಡದೆ, ಅದನ್ನು—ಯಾಜ್ಞವಲ್ಕ್ಯ ರಿಂದ ವೇದವನ್ನು ಕಾರಿಸುವ ಮೂಲ ಕಲ್ಪನೆಗೆ ನಿಮಿತ್ತವಾಗುವ ಹಾಗೆ ತಂದು ಜೋಡಿಸುವ ಕಾರ್ಯವನ್ನು '**ಬಿಂದು**' ಎಂಬ ಅರ್ಥಪ್ರಕೃತಿಯೇ ಮಾಡಿರುತ್ತದೆ.

ಈ ರೂಪಕದ "**ಪರಿಣಾಮ** ಅಥವಾ **ಫಲ**" ವೆಂಬುದಂತೂ ಪ್ರಸಿದ್ಧವಾಗಿಯೇ ಇದೆ. ಎಂದರೆ ಕಾರಿಕೆಯೋಪಾದಿಯಲ್ಲಿ ಅವ್ಯವಸ್ಥಿತ ವಾಗಿ ಮಿಶ್ರವಾಗಿರುವ ಕೃಷ್ಣಯಜುರ್ವೇದವು ಮುದ್ರಿಸಲ್ಪಟ್ಟು ಪುಸ್ತಕ ರೂಪದಿಂದ ಪ್ರಸಿದ್ಧವಾಗಿಯೇ ಇದೆ. ಆದ್ದರಿಂದ ಈ ಕೃಷ್ಣಯಜುರ್ವೇ ದವು ಹೇಗೆ ಅವ್ಯವಸ್ಥಿತವಾಗಿ ಮಿಶ್ರವಾಗಿರುತ್ತದೆಂಬುದನ್ನು ಆ ಪುಸ್ತಕ ದಲ್ಲಿ ಬೇಕಾದವರು ನೋಡಿಕೊಳ್ಳಬಹುದು.

ಒಟ್ಟಿನ ಮೇಲೆ ಈ ರೂಪಕದ ಲಕ್ಷ್ಯಾರ್ಥವೇನೆಂದರೆ, ಯಾಜ್ಞ ವಲ್ಕ್ಯರು ಅವ್ಯವಸ್ಥಿತ ಮಿಶ್ರವಾದ ಕೃಷ್ಣಯಜುರ್ವೇದವನ್ನು ವೈಶಂಪಾ ಯನ ಗುರುಗಳಿಂದ ಅಧ್ಯಯನ ಮಾಡಿ, ಅದನ್ನು ತಿತ್ತಿರಿ ಮೊದಲಾದ ಶಿಷ್ಯರಿಗೆ ಕಲಿಸಿ, ಕೃಷ್ಣಯಜುರ್ವೇದದ ೮೬ ಶಾಖೆಗಳನ್ನು ಸ್ಥಾಪಿಸಿ ದರೆಂಬುದು ಸಿದ್ಧ.

ಇನ್ನು ಈ ಕೃಷ್ಣಯಜುರ್ವೇದದ ಶಾಖಾಪ್ರವರ್ತಕರು ಯಾಜ್ಞ ವಲ್ಕ್ಯರೊಬ್ಬರೇ ಏಕೆಂಬುದನ್ನು ಸಪ್ರಮಾಣವಾಗಿ ವಿವೇಚಿಸುವಾ,

ಮೊಟ್ಟಮೊದಲು ಯಾಜ್ಞವಲ್ಕ್ಯರ ಪೂರ್ವಚರಿತ್ರವನ್ನು ಹೇಳಿ ಬಿಟ್ಟರೆ, ಇವರಲ್ಲಿದ್ದ ಲೋಕೋತ್ತರವಾದ ಸಾಮರ್ಥ್ಯವು ದೃಷ್ಟಿಗೋಚ ರವಾಗಿ, ಕೃಷ್ಣ, ಶುಕ್ಲ ಈ ಎರಡೂ ಯಜುರ್ವೇದಗಳ ಶಾಖಾಪ್ರವರ್ತಕ ರಾಗುವ ಬಹುಮಾನವು ಈ ಯಾಜ್ಞವಲ್ಕ್ಯರಿಗೆ ಯಾಕೆ ಪ್ರಾಪ್ತವಾಯಿ ತೆಂಬುದು ಸುಲಭವಾಗಿ ತಿಳಿದುಬರುವುದು.

ಯಾಜ್ಞವಲ್ಕ್ಯರ ತಂದೆಗೆ **'ದೇವರಾತ'** ಅಥವಾ **'ಬ್ರಹ್ಮರಾತ'** ಎಂಬುದು ಅಂಕಿತ ನಾಮವಾಗಿದೆ. ಈ ದೇವರಾತ ಋಷಿಗೆ **'ಯಜ್ಞವಲ್ಕ'** ಮತ್ತು **'ವಾಜಸನಿ'** ಎಂಬೆರಡು ಅನ್ವರ್ಥಕ ನಾಮಗಳಾಗಿದ್ದವು. ತಂದೆಯ ಇವೆರಡೂ ಅನ್ವರ್ಥಕ ನಾಮಗಳಿಂದ, ಮಗನಿಗೆ ಎಂದರೆ ಯಾಜ್ಞವಲ್ಕ್ಯನಿಗೆ ಹೆಸರುಗಳು ಹೇಗೆ ಪ್ರಾಪ್ತವಾದವೆಂಬುದನ್ನು ಶ್ರೀಶಂಕರಾಚಾರ್ಯರ ಭಾಷ್ಯದ ಆಧಾರದಿಂದಲೂ, ಶ್ರೀಸಾಯಣಾಚಾರ್ಯರ ಭಾಷ್ಯದ ಆಧಾರದಿಂದಲೂ ನಿರೂಪಿಸುವಾ,

ಶ್ರೀಶಂಕರಾಚಾರ್ಯರು ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಈ ವಿಷಯವಾಗಿ ಹೀಗೆ ಬರೆದಿದ್ದಾರೆ :— **"ಯಾಜ್ಞವಲ್ಕ್ಯೋ ಯಜ್ಞಸ್ಯ ವಲ್ಕೋ ವಕ್ತಾ ಯಜ್ಞವಲ್ಕಸ್ತಸ್ಯಾಪತ್ಯಂ ಯಾಜ್ಞವಲ್ಕ್ಯೋ ದೈವರಾತಿರಿತ್ಯರ್ಥಃ।** ಬ್ರಹ್ಮಣೋ ವಾಽಪತ್ಯಮ್ ॥" (ಅಧ್ಯಾಯ ೧, ಬ್ರಾಹ್ಮಣ ೪, ಕಂಡಿಕಾ ೩ )

ಅರ್ಥ:— ಯಜ್ಞಸ್ಯ=ಯಜ್ಞದ, ವಲ್ಕಃ ಎಂದರೆ ವಕ್ತಾ; ಅರ್ಥಾತ್ ಯಜ್ಞವಲ್ಕ=ಯಜ್ಞವಕ್ತಾ ಎಂದರೆ ಯಜ್ಞವಿದ್ಯಾಪ್ರವಚನಪಟು ಎಂದು ಇತ್ಯರ್ಥ. ಈ ಯಜ್ಞವಲ್ಕನ (=ದೇವರಾತನ=ಬ್ರಹ್ಮರಾತನ) ಮಗನು ಯಾಜ್ಞವಲ್ಕ್ಯನು. ಇತ್ಯರ್ಥವೇನೆಂದರೆ " **ಯಜ್ಞವಲ್ಕ** " ( ಯಜ್ಞವಕ್ತಾ ಎಂದರೆ ಯಜ್ಞವಿದ್ಯಾಪ್ರವಚನಪಟು ) ಎಂಬ ತಂದೆಯ ಅನ್ವರ್ಥಕನಾಮದಿಂದಲೇ ಮಗನಿಗೆ **'ಯಾಜ್ಞವಲ್ಕ್ಯ'** ಎಂಬ ತದ್ಧಿತಾಂತ ನಾಮವು ಪ್ರಾಪ್ತವಾಗಿರುತ್ತದೆಯೇ ಹೊರತು ಈ ಯಜ್ಞವಲ್ಕನ ಮಗನಿಗೆ ಎಂದರೆ ಯಾಜ್ಞವಲ್ಕ್ಯನಿಗೆ ಅಂಕಿತನಾಮವು ಏನಿತ್ತೆಂಬುದು ಎಲ್ಲೆಲ್ಲಿಯೂ ಗೊತ್ತಾಗುವುದಿಲ್ಲ. ಇಷ್ಟೇಅಲ್ಲ, ತಂದೆಯ ' ದೇವರಾತ ' ಎಂಬ ಅಂಕಿತನಾಮದಿಂದ ಮಗನಿಗೆ ಅಪತ್ಯಾರ್ಥದಲ್ಲಿ ಪ್ರಾಪ್ತವಾದ "ದೈವರಾತಿ" ಎಂಬ ತದ್ಧಿತಾಂತ ನಾಮವೂ ಸಹ ಎಲ್ಲಿಯೂ ವಿಶೇಷವಾಗಿ ಇಲ್ಲವೇ ಇಲ್ಲ. ಇದೂ ಅಲ್ಲದೆ ತಂದೆಯ "ವಾಜಸನಿ" ಎಂಬ ಅನ್ವರ್ಥಕ ನಾಮದಿಂದ ಅಪತ್ಯಾರ್ಥದಲ್ಲಿ ಮಗನಿಗೆ ಪ್ರಾಪ್ತವಾದ **"ವಾಜಸ**

**ನೇಯ**'' ಎಂಬ ತದ್ಧಿತಾಂತ ನಾಮವೂ ಸಹ ಅಷ್ಟೊಂದು ಪ್ರಸಿದ್ಧವಾಗಿರುವುದಿಲ್ಲ. ಆದರೆ ತಂದೆಯ ಕೇವಲ 'ಯಜ್ಞವಲ್ಕ' ಎಂಬ ಅನ್ವರ್ಥಕ ನಾಮದಿಂದ ಅಪತ್ಯಾರ್ಥದಲ್ಲಿ ನಿಷ್ಪನ್ನವಾದ "**ಯಾಜ್ಞವಲ್ಕ್ಯ**" ಎಂಬ ಹೆಸರಿನಿಂದಲೇ ಶ್ರುತಿ, ಸ್ಮೃತಿ. ಪುರಾಣಗಳಲ್ಲಿ ಈತನು ಪ್ರಖ್ಯಾತನಾಗಿದ್ದುದರಿಂದ ಈ ಯಾಜ್ಞವಲ್ಕ್ಯನು ತಮ್ಮ ತಂದೆಯ ಹಾಗೆಯೇ ಕಿಂಬಹುನಾ ತಂದೆಗಿಂತ ಒಂದುಪಾಲು ಹೆಚ್ಚು ಯಜ್ಞವಿದ್ಯಾಪ್ರವಚನಪಟು ಆಗಿದ್ದನೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಇತ್ಯರ್ಥವೇನೆಂದರೆ ಯಾಜ್ಞವಲ್ಕ್ಯರು ಯಜ್ಞವಿದ್ಯೆಯಲ್ಲಿ ಬಹು ನಿಷ್ಣಾತರಾಗಿದ್ದರೆಂ'ಬುದು ಸಿದ್ಧ.

ಯಜುರ್ವೇದಕ್ಕೆ ಯಜ್ಞಯಾಗಾದಿ ಕರ್ಮಕಾಂಡದಲ್ಲಿ ಪ್ರಾಧಾನ್ಯವಿರುತ್ತದೆಂಬುದನ್ನು ಸಾಯಣಾಚಾರ್ಯರ ಭಾಷ್ಯದಲ್ಲಿ ಹಿಂದೆಯೇ ನೋಡಿದ್ದೇವೆ. ( ಪುಟ ೫|೬ ) ಈ ಪ್ರಕಾರ ಯಜ್ಞಪ್ರಧಾನವಾದ ಎಂದರೆ ಯಜ್ಞಕರ್ಮವಿವರಣಪ್ರಧಾನವಾದ ಯಜುರ್ವೇದದ ಶಾಖಾಪ್ರವರ್ತಕರಾಗುವುದಕ್ಕೆ, ಯಜ್ಞವಿದ್ಯಾಪ್ರವಚನಪಟುಗಳಾದ ಅರ್ಥಾತ್ ಯಜ್ಞಕರ್ಮದಲ್ಲಿ ನಿಷ್ಣಾತರಾದ ಯಾಜ್ಞವಲ್ಕ್ಯರೇ ಸಮರ್ಥರೆಂದು ತಿಳಿದು

---

೧ ಶ್ರೀಸಾಯಣಾಚಾರ್ಯರು ಶುಕ್ಲಯಜುರ್ವೇದ ಕಾಣ್ವಸಂಹಿತೆಯ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ:—'' ವಾಜ ಇತ್ಯನ್ನಸ್ಯ ನಾಮಧೇಯಮ್ । ಅನ್ನಂವೈವಾಜ ಇತಿ ಶ್ರುತೇಃ । ವಾಜಸ್ಯ ಸನಿಃ=ದಾನಂ ಯಸ್ಯ ಮಹರ್ಷೇರಸ್ತಿ ಸೋಽಯಂ ವಾಜಸನಿಃ । ತಸ್ಯ ಪುತ್ರೋ ವಾಜಸನೇಯಸ್ತಸ್ಯ ಯಾಜ್ಞವಲ್ಕ್ಯ ಇತಿ ನಾಮಧೇಯಮ್ ।''

( ಚಶಕ ೧, ಅಧ್ಯಾಯ ೧, ಪುಟ ೩. )

'' ಅನ್ನಕ್ಕೆ 'ವಾಜ' ಎಂದು ಶ್ರುತಿಯಲ್ಲಿ ಉಕ್ತವಾಗಿದೆ. ವಾಜಸ್ಯ=ಅನ್ನದ ಸನಿ=ದಾನ. ಯಾವ ಮಹರ್ಷಿಯು ಅನ್ನದಾನ ಮಾಡುತ್ತಿದ್ದನೋ ಅವನು; ವಾಜಸನಿಋಷಿಯು (ಎಂದರೆ ದೇವರಾತ ಮುನಿಯು) ಈ 'ವಾಜಸನಿ'ಯ ಮಗನು ವಾಜಸನೇಯನು:--ಎಂದರೆ ಯಾಜ್ಞವಲ್ಕ್ಯನು.

ವೈಶಂಪಾಯನಋಷಿಗಳೂ ಆದಿತ್ಯಋಷಿಗಳೂ೧೩ ಈ ಯಾಜ್ಞವಲ್ಕ್ಯರೊ ಬ್ಬರಿಗೇನೇ ಕೃಷ್ಣಯಜುರ್ವೇದ, ಶುಕ್ಲಯಜುರ್ವೇದಗಳನ್ನು ಅಧ್ಯಯನ ಮಾಡಿಸಿ, ಈ ಸಮರ್ಥನಾದ ಶಿಷ್ಯನನ್ನು ಕುರಿತು "ನೀನೇ ಯಜ್ಞಪ್ರಧಾನ ವಾದ ಈ ಎರಡೂ ಯಜುರ್ವೇದಗಳ ಶಾಖಾಪ್ರವರ್ತಕನಾಗು" ಎಂದು ಆಜ್ಞಾಪಿಸಿದರು. ಅದೇಮೇರೆಗೆ ಮೊದಲು ಯಾಜ್ಞವಲ್ಕ್ಯರು ಕೃಷ್ಣಯಜು ರ್ವೇದದ ೮೬ ಶಾಖೆಗಳನ್ನು ಸ್ಥಾಪಿಸಿದರು. ತದನಂತರ ಶುಕ್ಲಯಜು ರ್ವೇದದ ೧೫ ಶಾಖೆಗಳನ್ನು ಸ್ಥಾಪಿಸಿದರು. ಎಂದರೆ ಈ ಯಾಜ್ಞವಲ್ಕ್ಯರೊ ಬ್ಬರೇ ಕೃಷ್ಣ ಮತ್ತು ಶುಕ್ಲ ಈ ಎರಡೂ ಯಜುರ್ವೇದಗಳ ಶಾಖಾ

---

(೧೩) ವೇದವ್ಯಾಸ ಋಷಿಗಳು ಶ್ರೀಹರಿಯ ಅವತಾರರೆಂದು ಪುರಾಣಗಳಲ್ಲಿ ವರ್ಣಿತರಾಗಿದ್ದಂತೆಯೇ. ಆದಿತ್ಯ ಋಷಿಗಳು ಶ್ರೀಸೂರ್ಯನಾರಾಯಣನ ಅವತಾರ ರೆಂದು ವಿಷ್ಣುಪುರಾಣಾದಿಗಳಲ್ಲಿ ಕೀರ್ತಿತರಾಗಿದ್ದಾರೆ. ಶ್ರೀಮನ್ಮಧ್ವಾಚಾರ್ಯರು ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದ ಉಪಕ್ರಮದಲ್ಲಿ ವರಾಹ ಪುರಾಣದ ಆಧಾರದಿಂದ ಹೀಗೆ ಹೇಳಿದ್ದಾರೆ:—

**"ವಾಜಿರೂಪೇಣ ಸೂರ್ಯೇಣ ಪ್ರೋಕ್ತಂ ವಾಜಸನೇಯ-**
**ಕಮ್ ॥ ೩ ॥"**

(ಎಂದರೆ ಶುಕ್ಲಯಜುರ್ವೇದವನ್ನು ಶ್ರೀಸೂರ್ಯನಾರಾಯಣನು ಆದಿತ್ಯ ಋಷಿಯ— ರೂಪವನ್ನು ಧಾರಣಮಾಡಿ ಉಪದೇಶಮಾಡಿದ್ದರಿಂದ ಈ ಶುಕ್ಲಯಜು ರ್ವೇದಕ್ಕೆ "ವಾಜಸನೇಯಕ" ಎಂಬ ಹೆಸರು ಪ್ರಾಪ್ತವಾಗಿದೆ.) ವಾಜಿನ್ ಎಂದರೆ ಸೂರ್ಯ ಎಂಬುದನ್ನು ಹಿಂದೆಯೇ ಸಿದ್ಧಮಾಡಿದ್ದೇವೆ (ಪುಟ ೧೮) ಇನ್ನು ಈ ಶ್ರೀಮಧ್ವೋಕ್ತಿಯ ಸ್ಪಷ್ಟೀಕರಣವನ್ನು ಮಾಡುವಾ,

ಆದಿತ್ಯಋಷಿಯು ಶ್ರೀಸೂರ್ಯನ ಅವತಾರನಾದುದರಿಂದ ಈ ಸೂರ್ಯ ನಾರಾಯಣನ "**ವಾಜಸನಿ**" (ಎಂದರೆ ಅನ್ನದಾತೃ) ಎಂಬ ಹೆಸರು ಆದಿತ್ಯ ಋಷಿಗೆ ಪ್ರಾಪ್ತವಾಗುವದು ಅಪರಿಹಾರ್ಯವಾಗಿದೆ. ಅರ್ಥಾತ್ ಈ ವಾಜಸನಿ ಋಷಿಯು (ಎಂದರೆ ಆದಿತ್ಯಋಷಿಯು) ಶುಕ್ಲಯಜುರ್ವೇದವನ್ನು ಯಾಜ್ಞವ ಲ್ಕ್ಯರಿಗೆ ಉಪದೇಶಮಾಡಿದ್ದರಿಂದ "ವಾಜಸನಿನಾ ಪ್ರೋಕ್ತಂ ವಾಜಸನೇಯಕಮ್।" ಎಂಬ ಯಥಾರ್ಥ ವ್ಯುತ್ಪತ್ತಿಯಿಂದ ಶುಕ್ಲಯಜುರ್ವೇದಕ್ಕೆ "ವಾಜಸನೇಯಕ" ಎಂಬ ತದ್ಧಿತಾಂತ ನಾಮವು ಪ್ರಾಪ್ತವಾಗಿರುತ್ತದೆಂದು ಇತ್ಯರ್ಥ.

ಪ್ರವರ್ತಕ ಋಷಿಗಳಾದರು. ಒಟ್ಟಿನಮೇಲೆ, **ಈ ಯಾಜ್ಞವಲ್ಕ್ಯರು ವೈಶಂಪಾಯನ ಋಷಿಗಳಿಗೂ ಆದಿತ್ಯಋಷಿಗಳಿಗೂ ಪರಮಪ್ರಿಯ ಶಿಷ್ಯರಾಗಿದ್ದರೆಂಬುದು ಸಿದ್ಧ.**

ಈ ಪ್ರಕಾರ ಯಾಜ್ಞವಲ್ಕ್ಯರು ಶುಕ್ಲಯಜುರ್ವೇದ, ಕೃಷ್ಣಯಜುರ್ವೇದಗಳಲ್ಲಿ ನಿಷ್ಣಾತರಾಗಿದ್ದರು; ಇಷ್ಟುಮಾತ್ರವೇ ಅಲ್ಲ, ಋಗ್ವೇದ, ಸಾಮವೇದ, ಅಥರ್ವವೇದಗಳಲ್ಲಿಯೂ ಪಾರಂಗತರಾಗಿದ್ದರು; ಎಂದರೆ ಇವರು ಚತುರ್ವೇದವೇತ್ತಾ ಆಗಿದ್ದರು. ಎಂದು ಶ್ರೀಶಂಕರಾಚಾರ್ಯರು ತಾವುಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಹೀಗೆ ಸಪ್ರಮಾಣವಾಗಿ ಹೇಳಿದ್ದಾರೆ:—

ವಿದೇಹ ದೇಶಾಧಿಪತಿಯಾದ ಜನಕಮಹಾರಾಜನು ಬಹುದಕ್ಷಿಣ ಯಜ್ಞವನ್ನು ಮಾಡಿದ ಕಾಲಕ್ಕೆ ಜರುಗಿದ ಮಹರ್ಷಿಗಳ ಸಭೆಯಲ್ಲಿ ಯಾಜ್ಞವಲ್ಕ್ಯರು ದಿಗ್ವಿಜಯಹೊಂದಿದ ವೃತ್ತಾಂತವು, ಬೃಹದಾರಣ್ಯಕೋಪನಿಷತ್ತಿನ ೩ ನೆಯ ಅಧ್ಯಾಯದಲ್ಲಿ ಚೆನ್ನಾಗಿ ವರ್ಣಿತವಾಗಿದೆ. ಈ ವೃತ್ತಾಂತವನ್ನು ಮುಂದಿನ ೨ ನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುವವರಿದ್ದೇವೆ; ಇರಲಿ. ಈ ಮಹರ್ಷಿಗಳ ಸಭೆಯಲ್ಲಿ ಯಾಜ್ಞವಲ್ಕ್ಯರು ತಮ್ಮ ಒಬ್ಬ ಶಿಷ್ಯನನ್ನು " **ಸಾಮಶ್ರವಾ** " ಎಂದು ಸಂಬೋಧಿಸಿದ್ದಾರೆ. ಈ " ಸಾಮಶ್ರವಾ " ಎಂಬ ಶಬ್ದಕ್ಕೆ ಭಾಷ್ಯವನ್ನು ಬರೆಯುವಾಗ್ಗೆ ಶ್ರೀಶಂಕರಾಚಾರ್ಯರು " ಶ್ರೀಯಾಜ್ಞವಲ್ಕ್ಯರು ಚತುರ್ವೇದ ಪಾರಂಗತರು" ಎಂದು ಹೀಗೆ ಸಿದ್ಧಾಂತವನ್ನು ಮಾಡಿದ್ದಾರೆ:—

" ಹೇ ಸಾಮಶ್ರವಃ ಸಾಮವಿಧಿಂ ಹಿ ಶೃಣೋತ್ಯತೋಽರ್ಥಾಚ್ಚತುರ್ವೇದೋ ಯಾಜ್ಞವಲ್ಕ್ಯಃ।" (ಅಧ್ಯಾಯ ೩, ಬ್ರಾಹ್ಮಣ ೧, ಕಂಡಿಕಾ ೨.)

ಅರ್ಥ:—ಶ್ರೀಯಾಜ್ಞವಲ್ಕ್ಯರು ತಮ್ಮ ಒಬ್ಬ ಶಿಷ್ಯನನ್ನು "ಎಲೈ ಸಾಮಶ್ರವಾ " ಎಂದು ಸಂಬೋಧಿಸಿದ್ದರಿಂದ ಆ ಶಿಷ್ಯನು, ಶ್ರೀಯಾಜ್ಞವಲ್ಕ್ಯರಿಂದ ಸಾಮವೇದದ ಪಾಠವನ್ನು ಕೇಳುತ್ತಿದ್ದನು; ಅರ್ಥಾತ್

ಸಾಮವೇದವನ್ನು ಕಲಿಯುತ್ತಿದ್ದನು; ಎಂಬುದು ವ್ಯಕ್ತವಾಗುತ್ತದೆ. ಆದ್ದರಿಂದ ಯಾಜ್ಞವಲ್ಕ್ಯರು ಚತುರ್ವೇದವೇತ್ತಾ ಆಗಿದ್ದರೆಂಬುದು ಸಿದ್ಧ.

ಶ್ರೀಶಂಕರಾಚಾರ್ಯರ ಈ ಭಾಷ್ಯದ ಸ್ಪಷ್ಟೀಕರಣವನ್ನು, ಶ್ರೀ ಆನಂದಗಿರಿಗಳು ತಾವುಬರೆದ ಟೀಕೆಯಲ್ಲಿ ಹೀಗೆ ಮಾಡಿದ್ದಾರೆ:-ಯಾಜ್ಞವಲ್ಕ್ಯರು ಸಂಪೂರ್ಣ ಯಜುರ್ವೇದ ವಿಶಾರದರೆಂಬುದು ಪ್ರಸಿದ್ಧವಾಗಿಯೇ ಇದೆ. ಇವರಿಂದ ಒಬ್ಬ ವಿದ್ಯಾರ್ಥಿಯು ಸಾಮವೇದವನ್ನು ಅಧ್ಯಯನ ಮಾಡುತ್ತಿದ್ದುದರಿಂದ ಈ ಯಾಜ್ಞವಲ್ಕ್ಯರು ಸಾಮವೇದದಲ್ಲಿಯೂ ನಿಷ್ಣಾತರಾಗಿದ್ದರೆಂಬುದು ಸ್ಪಷ್ಟವಾಗಿದೆ. ಸಾಮವೇದವು, ಕೇವಲ ಋಗ್ವೇದವನ್ನೇ ಅವಲಂಬಿಸಿರುತ್ತದಾದ್ದರಿಂದ ಇವರು ಋಗ್ವೇದಪಂಡಿತರೂ ಆಗಿದ್ದರೆಂಬುದು ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಅಥರ್ವವೇದವಂತೂ ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಅಂತರ್ಭೂತವಾಗಿದೆ. ಅರ್ಥಾತ್ ಯಾಜ್ಞವಲ್ಕ್ಯರು ಅಥರ್ವವೇದದಲ್ಲಿಯೂ ಪ್ರವೀಣರಾಗಿದ್ದರೆಂಬುದು ನಿಸ್ಸಂದೇಹವಾಗಿದೆ. ಅತಏವ **ಶ್ರೀಯಾಜ್ಞವಲ್ಕ್ಯರು ವೇದಚತುಷ್ಟಯ ವಿಶಿಷ್ಟರಾಗಿದ್ದರು;** ಎಂದರೆ **ಚತುರ್ವೇದ ಪಾರಂಗತರಾಗಿದ್ದರೆಂಬುದು ಸಿದ್ಧ.**

ಶ್ರೀಯಾಜ್ಞವಲ್ಕ್ಯರು ಬಾಷ್ಕಲ ಋಷಿಯಿಂದ ಋಗ್ವೇದವನ್ನು ಅಧ್ಯಯನ ಮಾಡಿದರೆಂದು ವಿಷ್ಣುಪುರಾಣದಲ್ಲಿ (ಅಂಶ ೩, ಅಧ್ಯಾಯ ೪, ಶ್ಲೋಕ ೧೭/೧೮.)ಮತ್ತು ಭಾಗವತ ಪುರಾಣದಲ್ಲಿ (ಸ್ಕಂಧ ೧೨, ಅಧ್ಯಾಯ ೬, ಶ್ಲೋಕ ೫೫) ಕಂಠೋಕ್ತವಾಗಿ ಹೇಳಿಯೇ ಇದೆ.



೨ನೆಯ ಅಧ್ಯಾಯ

# ಜನಕ ಮಹಾರಾಜನ ಸಭೆಯಲ್ಲಿ

# ಶ್ರೀಯಾಜ್ಞವಲ್ಕ್ಯರ ದಿಗ್ವಿಜಯ



ವೇದಾನ್ತವೇದ್ಯಂ ಸಕಲಾಗಮಜ್ಞಮ್ ।
ದಯಾಸುಧಾಸಿಂಧುಮನಂತರೂಪಮ್ ॥
ಶ್ರೀಯಾಜ್ಞವಲ್ಕ್ಯಂ ಪರಿಪೂರ್ಣಚಂದ್ರಮ್ ।
ಶ್ರೀಮದ್ಗುರುಂ ನಿತ್ಯಮಹಂ ನಮಾಮಿ ॥

ವಿದೇಹದೇಶದ ಚಕ್ರವರ್ತಿಯಾದ ಜನಕ ಮಹಾರಾಜನು ತನ್ನ ಮಿಥಿಲಾ ರಾಜಧಾನಿಯಲ್ಲಿ ಬಹುದಕ್ಷಿಣ ಯಜ್ಞವನ್ನು ಎಂದರೆ ಅಶ್ವಮೇಧವನ್ನು ಮಾಡಿದನು. ಈ ಸಾರ್ವಭೌಮರಾಜನು ಮಹಾ ಜ್ಞಾನಿಯೂ ಅತಿಶಯ ದಾನಶೂರನೂ ಎಂದು ಸುಪ್ರಸಿದ್ಧನಾಗಿದ್ದುದರಿಂದ ಕುರುದೇಶದ ಬ್ರಾಹ್ಮಣರೂ, ಪಂಚಾಲದೇಶದ ಬ್ರಾಹ್ಮಣರೂ ಈ ಯಜ್ಞಸಮಾರಂಭಕ್ಕೆ ವಿಶೇಷವಾಗಿ ಬಂದಿದ್ದರು. ಇವೆರಡೂ ದೇಶಗಳಲ್ಲಿ ಘನಪಂಡಿತರು ವಿಶೇಷವಾಗಿದ್ದರೆಂಬುದು ಪ್ರಖ್ಯಾತವಾಗಿದೆ. ಈ ಪ್ರಕಾರ ಒಂದೇಕಡೆಗೆ ಸೇರಿದ ದೊಡ್ಡ ವಿದ್ವತ್ಸಮುದಾಯವನ್ನು ನೋಡಿ, ಜನಕರಾಜನಿಗೆ ಈ ಪಂಡಿತರಲ್ಲಿ ಬ್ರಹ್ಮಿಷ್ಠರು ಯಾರು? ಎಂದರೆ ಈ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರು ಯಾರೆಂಬುದನ್ನು ತಿಳಿದುಕೊಳ್ಳುವ ಇಚ್ಛೆಯುಂಟಾಯಿತು. ಇಂಥ ಯಜ್ಞಸಮಾರಂಭದ ಕಾಲದಲ್ಲಿ ತತ್ತ್ವಜ್ಞಾನ ವಿಷಯವಾಗಿ ವಾದವಿವಾದಗಳು ಜರುಗುತ್ತಿದ್ದವು. ಈ ಪ್ರಾಚೀನ ಸಂಪ್ರದಾಯಕ್ಕನುಸರಿಸಿಯೇ ಜನಕರಾಜನು ಒಳ್ಳೆಯ

ಉತ್ಸಾಹಜನಕವಾದ ಒಂದು ಉಪಾಯವನ್ನು ಮಾಡಿದನು ಅದೇ ನೆಂದರೆ, ಒಂದುಸಾವಿರ ತರುಣ ಆಕಳುಗಳನ್ನು ಗೋಶಾಲೆಯಲ್ಲಿ ನಿಲ್ಲಿಸಿ, ಆ ಪ್ರತಿಯೊಂದು ಆಕಳಿನ ಎರಡೂ ಕೋಡುಗಳಿಗೆ ಸೇರಿ ಹತ್ತುತೊಲೆ ಗಳ (ಎಂದರೆ ಆಕಳಿನ ಒಂದೊಂದು ಕೋಡಿಗೆ ಐದೈದು ತೊಲೆಗಳ) ಸುವರ್ಣಪದಕಗಳನ್ನು ಕಟ್ಟಿಸಿ, ಈ ಸಹಸ್ರ ಆಕಳುಗಳನ್ನು ಎಲ್ಲರಿ ಗಿಂತಲೂ ಶ್ರೇಷ್ಠಬ್ರಹ್ಮಜ್ಞಾನಿಯು೧ ತೆಗೆದುಕೊಂಡು ಹೋಗಲೆಂಬ ಸ್ಪರ್ಧೆಯನ್ನು ಏರ್ಪಡಿಸಿದನು. ಆ ಮೇಲೆ ಆ ಜನಕ ಮಹಾರಾಜನು ಬ್ರಾಹ್ಮಣರನ್ನು ಕುರಿತು ಹೀಗೆ ಭಾಷಣಮಾಡಿದನು:— "ಹೇ ಪೂಜ್ಯ ಬ್ರಾಹ್ಮಣರೇ, ಇಕೋ, ಈ ಗೋಶಾಲೆಯಲ್ಲಿ ಒಂದು ಸಾವಿರ ತರುಣ ಆಕಳುಗಳು ಸುವರ್ಣಪದಕಗಳಿಂದ ಅಲಂಕೃತವಾಗಿ ನಿಂತಿರುತ್ತವೆ. ನಿಮ್ಮಲ್ಲಿ ಎಲ್ಲರಿಗಿಂತಲೂ ಶ್ರೇಷ್ಠಬ್ರಹ್ಮಿಷ್ಠನಾದವನು ಈ ಸಾವಿರ ಆಕಳುಗಳನ್ನು ತನ್ನ ಮನೆಗೆ ತೆಗೆದುಕೊಂಡು ಹೋಗಲಿ."

ಈ ಭಾಷಣವನ್ನು ಕೇಳಿ, ಅಲ್ಲಿ ಕುಳಿತಿರುವ ಬ್ರಾಹ್ಮಣ ಸಮು ದಾಯದಲ್ಲಿ ಯಾಜ್ಞವಲ್ಕ್ಯರ ಹೊರತು ಮತ್ತಿನ್ನಾವ ಬ್ರಾಹ್ಮಣನಿಗೂ ಆ ಸಹಸ್ರ ಆಕಳುಗಳನ್ನು ಸ್ವೀಕರಿಸುವುದಕ್ಕೆ ಧೈರ್ಯವುಂಟಾಗಲಿಲ್ಲ.

---

೧ ಈ ಆಖ್ಯಾಯಿಕೆಯು ವಿಜ್ಞಾನ ಸ್ತುತ್ಯರ್ಥವಾಗಿರುತ್ತದೆ ಎಂದರೆ ಜನಕ ರಾಜನು ಮಾಡಿದ ಈ ಉಪಾಯವು ತತ್ತ್ವಜ್ಞಾನದಪ್ರಶಂಸೆಗೋಸ್ಕರವಾಗಿರುತ್ತದೆ. ಏಕೆಂದರೆ ಜ್ಞಾನವನ್ನು ಎಂದರೆ ವಿದ್ಯೆಯನ್ನು ಸಂಪಾದಿಸುವುದಕ್ಕೆ ದಾನವು ಸಾಧನೀ ಭೂತವಾಗಿರುತ್ತದೆಂಬುದು ಪ್ರಸಿದ್ಧವಾಗಿದೆ.

ಗುರುಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ ॥
ಅಥವಾ ವಿದ್ಯಯಾ ವಿದ್ಯಾ ಚತುರ್ಥಂ ನೋಪಲಭ್ಯತೇ ॥

ಅರ್ಥ:— ಗುರುಸೇವೆಯಿಂದ ಅಥವಾ ಪುಷ್ಕಳ ದ್ರವ್ಯವನ್ನು ಕೊಡುವುದ ರಿಂದ ವಿದ್ಯೆಯು ಪ್ರಾಪ್ತವಾಗುತ್ತದೆ. ಇಲ್ಲವೆ ವಿದ್ಯೆಯಿಂದ ವಿದ್ಯೆಯು ದೊರೆ ಯುತ್ತದೆ. ಈ ಮೂರು ಸಾಧನಗಳ ಹೊರತು ನಾಲ್ಕನೆಯ ಸಾಧನವಿಲ್ಲ. ಸಾರಾಂಶ, ವಿದ್ವಾನರ ಸಮೂಗಮದಲ್ಲಿ ನಡೆಯುವ ವಾದವಿವಾದದಿಂದ ವಿದ್ಯೆಯು ಪ್ರಾಪ್ತ ವಾಗುತ್ತದೆ. ಹಾಗೂ ಪ್ರಜ್ಞಾವೃದ್ಧಿಯಾಗುತ್ತದೆಂಬುದು ಅನುಭವಸಿದ್ಧವಾಗಿದೆ.

ಎಂದರೆ ಅವರಿಗೆ ತಮ್ಮ ಬ್ರಹ್ಮಿಷ್ಠತೆಯ ಬಗ್ಗೆ ಪ್ರತಿಜ್ಞೆಯನ್ನು ಮಾಡುವುದಕ್ಕೆ ಆತ್ಮವಿಶ್ವಾಸವುಂಟಾಗಲಿಲ್ಲ. ಆದರೆ ತಮ್ಮ ಬ್ರಹ್ಮಿಷ್ಠತೆಯ ಬಗ್ಗೆ ಪ್ರಚಂಡವಾದ ಆತ್ಮವಿಶ್ವಾಸವುಳ್ಳಂಥ ಯಾಜ್ಞವಲ್ಕ್ಯರು ಮಾತ್ರ ತಮ್ಮಲ್ಲಿ ಸಾಮವೇದವನ್ನು ಅಧ್ಯಯನ ಮಾಡತಕ್ಕಂಥ ವಿದ್ಯಾರ್ಥಿಯನ್ನು ಕುರಿತು:—"ಹೇ ಪ್ರಿಯದರ್ಶನಾ ಸಾಮಶ್ರವಾ! ಈ ಸಹಸ್ರ ಆಕಳುಗಳನ್ನು ನೀನು ನಮ್ಮ ಆಶ್ರಮಕ್ಕೆ ತೆಗೆದುಕೊಂಡು ಹೋಗು." ಎಂದು ಅಪ್ಪಣೆಯನ್ನಿತ್ತರು. ಕೂಡಲೆ ಶಿಷ್ಯನಾದ ಸಾಮಶ್ರವನು ಈ ಆಕಳುಗಳನ್ನೆಲ್ಲ ಯಾಜ್ಞವಲ್ಕ್ಯರ ಆಶ್ರಮಕ್ಕೆ ಅಟ್ಟಿಕೊಂಡು ಹೋದನು. ಇದನ್ನು ನೋಡಿ, ಮಿಕ್ಕ ಬ್ರಾಹ್ಮಣರೆಲ್ಲರೂ ಸಿಟ್ಟಿಗೆದ್ದರು. ಸಭೆಯಲ್ಲೆಲ್ಲ ಅಲ್ಲೋಲಕಲ್ಲೋಲವಾಯಿತು! ಆದರೆ ಆ ಬ್ರಾಹ್ಮಣ ಸಮುದಾಯದಲ್ಲಿ ಆಗ ಯಾಜ್ಞವಲ್ಕ್ಯರು ಮಾತ್ರ ಧೀರೋದಾತ್ತವೃತ್ತಿಯಿಂದ ಶಾಂತಚಿತ್ತದಿಂದ ಸ್ವಸ್ಥಾನದಲ್ಲಿ ಕುಳಿತಿದ್ದರು. ಆ ಸಮಯದಲ್ಲಿ-(೧) ಅಶ್ವಲ (೨) ಜಾರತ್ಕಾರವ ಆರ್ತಭಾಗ (೩) ಲಾಹ್ಯಾಯನಿ ಭುಜ್ಯು (೪) ಚಾಕ್ರಾಯಣ ಉಷಸ್ತ (೫) ಕೌಷೀತಕೇಯ ಕಹೋಲ (೬) ವಾಚಕ್ನವಿ ಗಾರ್ಗಿ (೭) ಉದ್ದಾಲಕ ಆರುಣಿ (೮) ವಾಚಕ್ನವಿ ಗಾರ್ಗಿ (೯) ವಿದಗ್ಧ ಶಾಕಲ್ಯ ಪ್ರಭೃತಿ ಮಹನೀಯರು ಅಧ್ಯಾತ್ಮವಿದ್ಯೆಯನ್ನು ಕುರಿತು ಯಾಜ್ಞವಲ್ಕ್ಯರಿಗೆ ಅನೇಕ ಪ್ರಶ್ನೆಗಳನ್ನು ಕೇಳಿ, ಅವರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಲ್ಲೆಂಬುದನ್ನು ತೋರಿಸುವುದಕ್ಕೆ ಹೋರಾಡಿದರು. ಆದರೆ ಮಹಾಜ್ಞಾನಿಗಳಾದ ಯಾಜ್ಞವಲ್ಕ್ಯರು ಇವರೆಲ್ಲರ ಪ್ರಶ್ನೆಗಳಿಗೆ ಬ್ರಹ್ಮಜ್ಞಾನಪರಿಪ್ಲುತವಾದ ಯೋಗ್ಯ ಉತ್ತರಗಳನ್ನು ಕೊಟ್ಟು, ಈ ಎಂಟೂ ಜನರನ್ನು ನಿರುತ್ತರರನ್ನಾಗಿ ಮಾಡಿ, ಈ ಜನಕ ರಾಜನ ಸಭೆಯಲ್ಲಿ ದಿಗ್ವಿಜಯವನ್ನು ಹೊಂದಿದರು. ಅತಏವ ಶ್ರೀಯಾಜ್ಞವಲ್ಕ್ಯರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೆಂಬುದು ಎಲ್ಲರಿಗೂ ಗೊತ್ತಾಯಿತು.

ಈ ವಾದವಿವಾದವು, ಬೃಹದಾರಣ್ಯಕ ಉಪನಿಷತ್ತಿನ ಮುನಿಕಾಂಡವೆಂಬ ಮೂರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಈ ಉಪನಿಷತ್ತಿಗೆ ಶ್ರೀಶಂಕರಾಚಾರ್ಯರೂ, ಶ್ರೀಮಧ್ವಾ

ಚಾರ್ಯರೂ ಹಾಗೂ ಶ್ರೀರಂಗ ರಾಮಾನುಜಾಚಾರ್ಯರೂ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯಗಳ ಆಧಾರದಿಂದ ಈ ವಾದವಿವಾದದ ಸಾರಾಂಶವನ್ನು ಹೇಳಲುಪಕ್ರಮಿಸುತ್ತೇವೆ.

ಆ ಬ್ರಾಹ್ಮಣ ಸಭೆಯಲ್ಲಿ ಮೊಟ್ಟಮೊದಲು ಜನಕರಾಜನ ಹೋತೃವಾದಂಥ ಎಂದರೆ ಹವನ ಮಾಡುವ ಋತ್ವಿಜನಾದಂಥ ಅಶ್ವಲನೆಂಬ ಬ್ರಾಹ್ಮಣನು ವಾದ ಮಾಡಲಾರಂಭಿಸಿದನು,

## (೧) ಅಶ್ವಲ ಬ್ರಾಹ್ಮಣ

ಅಶ್ವಲನು ಯಾಜ್ಞವಲ್ಕ್ಯರನ್ನು ಕುರಿತು:— "ಹೇ, ಯಾಜ್ಞವಲ್ಕ್ಯ ಮುನಿಯೇ ಈ ಬ್ರಾಹ್ಮಣ ಸಮುದಾಯದಲ್ಲಿ ಶ್ರೇಷ್ಠ ಬ್ರಹ್ಮಜ್ಞಾನಿಯು ಅರ್ಥಾತ್ ಬ್ರಹ್ಮಿಷ್ಠನು ನೀನೊಬ್ಬನೇ ಏನು ?" ಎಂದು ಕೇಳಿದನು. ಅದಕ್ಕೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ:— "ನಾವು ಬ್ರಹ್ಮಿಷ್ಠರಿಗೆ ನಮಸ್ಕಾರ ಮಾಡುತ್ತೇವೆ. ಆದರೆ ಈ ಆಕಳುಗಳು ನಮಗೆ ಪ್ರಾಪ್ತವಾಗಬೇಕೆಂಬುದೇ ನಮ್ಮ ಇಚ್ಛೆಯಾಗಿದೆ." ಅರ್ಥಾತ್ ಯಾಜ್ಞವಲ್ಕ್ಯರು ತಮ್ಮ ಬ್ರಹ್ಮಿಷ್ಠತೆಯ ಪ್ರತಿಜ್ಞೆಯನ್ನು ಮಾಡಿದರೆಂದು ಇತ್ಯರ್ಥ.

ಆದುದರಿಂದಲೇ ಅಶ್ವಲನು ಯಾಜ್ಞವಲ್ಕ್ಯರಿಗೆ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ಹೀಗೆ ಪ್ರಶ್ನೆ ಮಾಡಲಾರಂಭಿಸಿದನು:—"ಹೇ, ಯಾಜ್ಞವಲ್ಕ್ಯ ಮುನಿಯೇ, ಈ ಸರ್ವ ವಿಶ್ವವು ಮೃತ್ಯುವಿನಿಂದ ವ್ಯಾಪಿಸಿದೆ. ಸಮಸ್ತ ಕರ್ಮಗಳನ್ನೂ ಕರ್ಮದ ಸಾಧನಗಳನ್ನೂ ಮೃತ್ಯುವು ತನ್ನ ವಶದಲ್ಲಿಟ್ಟುಕೊಂಡಿದೆ. ಆದ್ದರಿಂದ ಯಜಮಾನನು ಈ ಮೃತ್ಯುವಿನ ವ್ಯಾಪ್ತಿಯ ಅತಿಕ್ರಮಣಮಾಡಿ, ಯಾವ ಜ್ಞಾನದಿಂದ ಮುಕ್ತನಾಗುತ್ತಾನೆ?" ಈ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ, "ಯಜ್ಞಕರ್ಮವನ್ನು ಮಾಡುತ್ತಿರುವಾಗ್ಗೆ ಯಜಮಾನನು ತಾನು ಹೋತೃಸ್ವರೂಪನಾಗಿದ್ದೇನೆ, ಅಗ್ನಿಸ್ವರೂಪನಾಗಿದ್ದೇನೆ, ಅಥವಾ ವಾಗ್ದೇವತಾ ಸ್ವರೂಪನಾಗಿದ್ದೇನೆ. ಎಂಬ ದೃಷ್ಟಿಯನ್ನಿಟ್ಟುಕೊಂಡರೆ, ಅವನು

ಮುಕ್ತನಾಗುತ್ತಾನೆ; ಅತಿ ಮುಕ್ತನಾಗುತ್ತಾನೆ." ಈ ಉತ್ತರದಲ್ಲಿ ಮುಕ್ತಿ ಮತ್ತು ಅತಿ ಮುಕ್ತಿ ಎಂದು ಮುಕ್ತಿಯ ಎರಡು ಸ್ಥಿತಿಗಳನ್ನು ಹೇಳಿದ್ದಾರೆ. "ನಾನು ಯಜ್ಞಕರ್ಮಮಾಡುವಂಥ ಹೋತಾಋತ್ವಿಜನಾಗಿದ್ದೇನೆ; ಅಗ್ನಿಯ ಸಾಹಾಯ್ಯದಿಂದ ಯಜ್ಞವನ್ನುಮಾಡುತ್ತಿರುತ್ತೇನೆ. ಹಾಗೂ ವಾಣಿಯ ಯೋಗ್ಯ ಉಪಯೋಗವನ್ನು ಮಾಡುತ್ತಿದ್ದೇನೆ." ಎಂಬ ಭಾವನೆಯನ್ನು ಇಟ್ಟುಕೊಂಡರೆ, ಯಜಮಾನನು ಸ್ವರ್ಗಾದಿ ಶ್ರೇಷ್ಠ ಲೋಕಗಳನ್ನು ಪಡೆಯುತ್ತಾನೆ. ಇದು ಸಾಧಾರಣ ಮುಕ್ತಿಯಾಗಿದೆ. ಆದರೆ ಯಜಮಾನನು ತಾನು ಹೋತೃಸ್ವರೂಪ, ಅಗ್ನಿಸ್ವರೂಪ, ವಾಗ್ದೇವತಾಸ್ವರೂಪನಾಗಿದ್ದೇನೆಂಬ ಭಾವನೆಯನ್ನಿಟ್ಟುಕೊಂಡರೆ, ಅವನು ಅತಿ ಮುಕ್ತಿಯನ್ನು ಹೊಂದುತ್ತಾನೆ. ಎಂದರೆ ಆತನಿಗೆ ಪರಮಾತ್ಮಸಾಕ್ಷಾತ್ಕಾರವಾಗಿ, ಆತನು ಪರಬ್ರಹ್ಮಸಿದ್ಧಿಯನ್ನು ಪಡೆಯುತ್ತಾನೆ. ಆ ಬಳಿಕ ಅವನಿಗೆ ಸಂಸಾರದ ಹಾಗೂ ಕರ್ಮಗಳ ಸಂಬಂಧವು ಏನೂ ಉಳಿಯುವುದಿಲ್ಲ. ಇದೇ ಅತಿಮುಕ್ತಿ.

ಇದೇಪ್ರಕಾರ ಅಶ್ವಲನು ಕೇಳಿದ ನಾಲ್ಕು ಪ್ರಶ್ನೆಗಳಿಗೆ ಮುಕ್ತಿ, ಅತಿಮುಕ್ತಿ ಎಂದರೆ ಏನೆಂಬುದನ್ನು ವಿವರಿಸಿ ಹೇಳಿದ್ದಾರೆ. ಇದಲ್ಲದೆ ಅಶ್ವಲನು ಕೇಳಿದ ಹೋತೃ ಋತ್ವಿಜನ, ಅಧ್ವರ್ಯು ಋತ್ವಿಜನ, ಬ್ರಹ್ಮಾ ಋತ್ವಿಜನ, ಹಾಗೂ ಉದ್ಗಾತಾಋತ್ವಿಜನ ಋಚೆಗಳನ್ನೂ ಕರ್ಮಗಳನ್ನೂ ವಿವೇಚಿಸಿ ಹೇಳಿ, ಇವರೆಲ್ಲ ಋತ್ವಿಜರ ವಿಷಯದಲ್ಲಿಯೂ, ಋಚೆಗಳ ವಿಷಯದಲ್ಲಿಯೂ, ಆಹುತಿಗಳ ವಿಷಯದಲ್ಲಿಯೂ ಅಲ್ಲದೆ ಇತರ ಕರ್ಮಗಳ ವಿಷಯದಲ್ಲಿಯೂ ಅಲೌಕಿಕ ದೇವತಾದೃಷ್ಟಿಯನ್ನಿಟ್ಟುಕೊಂಡರೆ ಸ್ವರ್ಗಪ್ರಾಪ್ತಿರೂಪವಾದ ಮುಕ್ತಿಯೂ ಮತ್ತು ಅತಿ ಮುಕ್ತಿಯೂ ಪ್ರಾಪ್ತವಾಗುತ್ತದೆಂದು ವಿಶದಮಾಡಿ ಹೇಳಿದರು.

ಈಪ್ರಕಾರ ಎಲ್ಲ ಪ್ರಶ್ನೆಗಳಿಗೂ ಯಾಜ್ಞವಲ್ಕ್ಯರು ಸಮರ್ಪಕವಾದ ಉತ್ತರಗಳನ್ನು ಹೇಳಿದ ಕೂಡಲೇ 'ಯಾಜ್ಞವಲ್ಕ್ಯರು ಸಾಮಾನ್ಯರಲ್ಲ; ಮಹಾಪುರುಷರಾಗಿದ್ದಾರೆ. ಇವರ ಸಂಗಡ ವಾದಮಾಡುವುದು ನಮ್ಮ ಸಾಮರ್ಥ್ಯವಲ್ಲ.' ಎಂದು ತಿಳಿದು ಅಶ್ವಲನು ಸುಮ್ಮನೆ ಕುಳಿತನು.

## (೨) ಜಾರತ್ಕಾರವ ಆರ್ತಭಾಗ ಬ್ರಾಹ್ಮಣ

ಅಶ್ವಲನು ಸುಮ್ಮನೆ ಕುಳಿತ ಬಳಿಕ ಜರತ್ಕಾರು ಗೋತ್ರದ ಋತ ಭಾಗ ಋಷಿಯ ಮಗನಾದ ಆರ್ತಭಾಗನು ಯಾಜ್ಞವಲ್ಕ್ಯರನ್ನು ಕುರಿತು ಗ್ರಹಾತಿಗ್ರಹಗಳ ವಿಷಯವಾಗಿಯೂ ಮೃತ್ಯುವಿನ ವಿಷಯವಾಗಿಯೂ ಪ್ರಶ್ನೆಗಳನ್ನು ಕೇಳಲಾರಂಭಿಸಿದನು.

(೧) ಸಂಸಾರದಲ್ಲಿಯ ನಮ್ಮ ಎಲ್ಲ ಕರ್ಮಗಳ ಸಂಬಂಧವನ್ನು ಗ್ರಹಗಳು ಮತ್ತು ಅತಿಗ್ರಹಗಳು ಉತ್ಪನ್ನ ಮಾಡಿರುತ್ತವೆ. ಅರ್ಥಾತ್ ಈ ಗ್ರಹಾತಿಗ್ರಹಗಳು ಮೃತ್ಯುರೂಪವಾದ ಈ ಸಂಸಾರ ಸಂಬಂಧಕ್ಕೆ ಕಾರಣಗಳಾಗಿರುತ್ತವೆ. ಆದ್ದರಿಂದ ಆ ಗ್ರಹಗಳು ಎಷ್ಟಿರುತ್ತವೆ? ಅತಿಗ್ರಹಗಳು ಎಷ್ಟಿರುತ್ತವೆ ? ತಿಳಿಸಿರಿ.

ಈಪ್ರಶ್ನೆಗೆ ಯಾಜ್ಞವಲ್ಕ್ಯರು ಹೀಗೆ ಉತ್ತರವನ್ನು ಹೇಳಿದ್ದಾರೆ:— ಗ್ರಹಗಳು ಎಂಟು ಇರುತ್ತವೆ; ಅತಿಗ್ರಹಗಳು ಎಂಟು ಇರುತ್ತವೆ. ಅವು ಯಾವುವೆಂದರೆ, ಹಾಗೂ ಅವುಗಳ ಕಾರ್ಯಗಳು ಯಾವುವೆಂದರೆ (೧) ಘ್ರಾಣೇಂದ್ರಿಯು ಗ್ರಹವು, ಅಪಾನವಾಯುರೂಪವಾದ ಅತಿ ಗ್ರಹದಿಂದ ಬದ್ಧವಾಗಿದ್ದು, ಗಂಧಜ್ಞಾನವನ್ನು ಕೊಡುತ್ತದೆ. (೨) ವಾಣಿಯು ಗ್ರಹವಾಗಿದ್ದು, ಸಂಜ್ಞಾರೂಪವಾದ ಶಬ್ದವೆಂಬ ಅತಿಗ್ರಹದಿಂದ ಬದ್ಧವಾಗಿದೆ. ಈ ಯೋಗದಿಂದ ಶಬ್ದಜ್ಞಾನವಾಗುತ್ತದೆ. (೩) ಜಿಹ್ವೆಯು ಗ್ರಹವಾಗಿದ್ದು, ಅದು ರಸವೆಂಬ ಅತಿಗ್ರಹದಿಂದ ಬದ್ಧವಾಗಿದ್ದು, ರಸ ಜ್ಞಾನವನ್ನು ಕೊಡುತ್ತದೆ. (೪) ನೇತ್ರವು ಗ್ರಹವಾಗಿದ್ದು, ರೂಪಜ್ಞಾನ ವನ್ನು ಕೊಡುವಂಥ ರೂಪವು ಅತಿಗ್ರಹವಾಗಿವೆ. (೫) ಕಿವಿಯು ಗ್ರಹವಾ ಗಿದ್ದು, ಧ್ವನಿಜ್ಞಾನವನ್ನು ಕೊಡುವಂಥ ಧ್ವನಿಯು ಅತಿಗ್ರಹವಾಗಿದೆ. (೬) ಮನಸ್ಸು ಗ್ರಹವಾಗಿದ್ದು, ಕಾಮಾಭಿನಿವೇಶವನ್ನು ಉತ್ಪನ್ನ ಮಾಡುವಂಥ ಕಾಮವು ಅತಿಗ್ರಹವಾಗಿದೆ. (೭) ಹಸ್ತವು ಗ್ರಹವಾ ಗಿದ್ದು, ಕ್ರಿಯಾಶಕ್ತಿಯನ್ನು ಕೊಡುವಂಥ ಕರ್ಮರೂಪವು ಅತಿಗ್ರಹವಾ ಗಿದೆ. (೮) ತ್ವಚೆಯು ಗ್ರಹವಾಗಿದ್ದು ಸ್ಪರ್ಶಜ್ಞಾನವನ್ನು ಕೊಡು ವಂಥ ಸ್ಪರ್ಶವು ಅತಿಗ್ರಹವಾಗಿದೆ.

ಹೀಗೆ ಹೇಳಿದ ಮೇಲೆ ಆರ್ತಭಾಗನು ಎರಡನೆಯ ಪ್ರಶ್ನೆಯನ್ನು ಹೀಗೆ ಕೇಳಿದನು:—ಈ ಗ್ರಹಾತಿಗ್ರಹರೂಪವಾದ ಮೃತ್ಯುವಿಗೆ ಸಮಸ್ತ ಸಂಸಾರವೆಲ್ಲ ಅನ್ನವಾಗಿದೆ. ಆದರೆ ಈ ಮೃತ್ಯುವನ್ನೇ ತಿನ್ನುವ ಯಾವುದೊಂದು ದೇವತೆಯು ಇದೆಯೋ? ಇಲ್ಲವೋ? ಅಗ್ನಿಯು ಸರ್ವ ಭಕ್ಷಕನಾಗಿದ್ದಾನೆ; ಆದರೆ ಅಗ್ನಿಯನ್ನು ತಿನ್ನುವ ನೀರು ಇದ್ದೇಇದೆ. ಇದೇಮೇರೆಗೆ ಮೃತ್ಯುವು ಸಮಸ್ತಸಂಸಾರವನ್ನೆಲ್ಲ ತಿನ್ನುತ್ತದೆ; ಆದರೆ ಈ ಮೃತ್ಯುವನ್ನು ತಿನ್ನುವ ಎಂದರೆ ನಾಶಮಾಡುವ ದೇವತೆಯು ಯಾವುದು? ಈಪ್ರಶ್ನೆಗೆ ಯಾಜ್ಞವಲ್ಕ್ಯರು ಹೀಗೆ ಉತ್ತರಕೊಟ್ಟರು:— "ಮೃತ್ಯುವಿನ ನಾಶವನ್ನು ಮಾಡುವಂಥ ದೇವತೆಯು ಪರಮಾತ್ಮ ನಾಗಿದ್ದಾನೆ. ಈ ಪರಮಾತ್ಮನು ಸಕಲ ಸಂಗತಿಗಳನ್ನು ನಾಶಮಾಡುವ ವನಾಗಿದ್ದು, ಸ್ವತಃ ಅಮೃತಸ್ವರೂಪನಾಗಿದ್ದಾನೆ." ಈ ಉತ್ತರವನ್ನು ಕೇಳಿ ಆರ್ತಭಾಗನು ಆಶ್ಚರ್ಯಚಕಿತನಾಗಿ ನಿರುತ್ತರನಾದನು. ಏಕೆಂದರೆ, ಆರ್ತ ಭಾಗನು ಈ ಪ್ರಶ್ನೆಯನ್ನು ಕೇಳುವುದರಲ್ಲಿ ಒಂದು ಮನೋರಾಜ್ಯವನ್ನು ಮಾಡಿಕೊಂಡಿದ್ದನು; ಏನೆಂದರೆ, ಮೃತ್ಯುವಿನ ಮೃತ್ಯುವು ಇದೆ; ಎಂದು ಹೇಳಿದರೆ, ಮೃತ್ಯುವಿನ ಮೃತ್ಯುವಿನ ಮೃತ್ಯುವು ಕೂಡ ಇರಲೇಬೇಕಾಗು ತ್ತದೆ. ಈರೀತಿ೧ ಅನವಸ್ಥಾಪ್ರಸಂಗವು ಬಂದೊದಗಿ, ಯಾಜ್ಞವಲ್ಕ್ಯರು ಗೊಂದಲದಲ್ಲಿ ಬೀಳುವರು; ಎಂದು ತಿಳಿದುಕೊಂಡು, ಆರ್ತಭಾಗನು ಇದು ದೊಡ್ಡ ಬಿಕ್ಕಟ್ಟಿನ ಪ್ರಶ್ನೆಯೆಂಬ ಭಾವನೆಯಿಂದ ಈ ಪ್ರಕಾರ ಯಾಜ್ಞವಲ್ಕ್ಯರಿಗೆ ಪ್ರಶ್ನೆಮಾಡಿದ್ದನು. ಆದರೆ ಆರ್ತಭಾಗನ ಮನೋ ರಥವು ಈಡೇರಲಿಲ್ಲ.

---

೧ ಮೃತ್ಯುವಿನ ಮೃತ್ಯುವು ಇಂಥದೆಂದು ಹೇಳಿದರೆ, ಈ ಪ್ರಕಾರ ಅನವಸ್ಥಾ ಪ್ರಸಂಗವು ಬಂದೊದಗುವುದು. ಇನ್ನು, ಮೃತ್ಯುವಿನ ಮೃತ್ಯುವು ಇಂತಹದೆಂದು ಹೇಳದಿದ್ದರೆ, ಗ್ರಹಾತಿಗ್ರಹ ರೂಪವಾದ ಮೃತ್ಯುವಿನಿಂದ ಮೋಕ್ಷವು ಸಂಭವಿಸು ವುದಿಲ್ಲ. ಗ್ರಹಾತಿಗ್ರಹ ರೂಪವಾದ ಮೃತ್ಯುವು ನಾಶವಾದರೇನೇ ಮೋಕ್ಷವು ಸಂಭವಿ ಸುವುದು. ಈ ಗ್ರಹಾತಿಗ್ರಹ ರೂಪವಾದ ಮೃತ್ಯುವು ನಾಶವಾಗಬೇಕಾದರೆ, ಮೃತ್ಯುವಿನ ಮೃತ್ಯುವು ಇದ್ದೇ ತೀರಬೇಕಾಗುವುದು. ಹೀಗಿದ್ದುದರಿಂದ ಯಾಜ್ಞ ವಲ್ಕ್ಯರು ತೊಂದರೆಯಲ್ಲಿ ಬೀಳುವರೆಂದು ಆರ್ತಭಾಗನು ತಿಳಿದುಕೊಂಡಿ ದ್ದನು. ಆದರೆ ಆವನ ಮನೋರಾಜ್ಯವು ವ್ಯರ್ಥವಾಯಿತು.

ತರುವಾಯ ಆರ್ತಭಾಗನು ಪುನಃ ಮತ್ತೊಂದು ಪ್ರಶ್ನೆಯನ್ನು ಕೇಳಿದನು. "ಜ್ಞಾನಿಯು ಮರಣಹೊಂದಿದಮೇಲೆ ಅವನ ಆತ್ಮವು, ಅವನ ದೇಹದಿಂದ ಎದ್ದುಹೋಗುತ್ತದೆಯೋ ಇಲ್ಲವೋ?" ಈ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಹೇಳಿದ್ದೇನೆಂದರೆ, "ಸರ್ವವ್ಯಾಪಿಯಾದ ಜ್ಞಾನಿಯ ಆತ್ಮವು ಎದ್ದು ಬೇರೆಕಡೆಗೆ ಎಲ್ಲಿಯೂ ಹೋಗುವ ಕಾರಣ ವಿಲ್ಲ.'' ಆ ಬಳಿಕ ಆರ್ತಭಾಗನು ಕೇಳಿದ್ದೇನೆಂದರೆ, ದೇಹವು ಮೃತ ವಾದನಂತರ ಆ ಮನುಷ್ಯನ ವಾಣಿಯು ಅಗ್ನಿಯಲ್ಲಿ, ಪ್ರಾಣವು ವಾಯುವಿನಲ್ಲಿ; ಕಣ್ಣುಗಳು ಆದಿತ್ಯನಲ್ಲಿ; ಮನಸ್ಸು ಚಂದ್ರನಲ್ಲಿ; ಕಿವಿಯು ದಿಶೆಯಲ್ಲಿ; ಶರೀರವು ಪೃಥ್ವಿಯಲ್ಲಿ; ಹೃದಯವು ಆಕಾಶದಲ್ಲಿ; ದೇಹದ ಮೇಲಿನ ಲೋಮವು ಔಷಧದಲ್ಲಿ; ಕೇಶವು ವನಸ್ಪತಿಯಲ್ಲಿ; ರಕ್ತ-ರೇತಸ್ಸುಗಳು ಉದಕವಲ್ಲಿ ಲಯಹೊಂದುವವೆಂದು ನೀವು ಹೇಳುವುದು ನಿಜವು. ಆದರೆ ಪುರುಷನು ಎಲ್ಲಿ ಹೋಗುವನು? ಎಂದು ಕೇಳಿದನು. ಆಗ ಯಾಜ್ಞವಲ್ಕ್ಯರು:— "ಹೇ ಪ್ರಿಯದರ್ಶನಾ ಆರ್ತಭಾಗಾ! ನಿನ್ನ ಕೈಯನ್ನು ನನ್ನ ಕೈಯಲ್ಲಿ ತಾ. ನಾವಿಬ್ಬರೂ ಈ ಜನಸಮೂಹವನ್ನು ಬಿಟ್ಟು, ಏಕಾಂತದಲ್ಲಿ ಹೋಗೋಣ; ಅಲ್ಲಿ ವೇದಾಂತರಹಸ್ಯವನ್ನು ನಿನಗೆ ನಾನು ಹೇಳುತ್ತೇನೆ." ಎಂದು ನುಡಿದು, ಆರ್ತಭಾಗನನ್ನು ಕರೆದು ಕೊಂಡು ಏಕಾಂತದಲ್ಲಿ ಹೋಗಿ, ಆರ್ತಭಾಗನಿಗೆ ಹೀಗೆ ಉಪದೇಶ ಮಾಡಿದರು:— "ಮನುಷ್ಯನು ಪುಣ್ಯಕರ್ಮಮಾಡುವುದರಿಂದ ಪುಣ್ಯಲೋಕಕ್ಕೂ ಪಾಪಕರ್ಮಮಾಡುವುದರಿಂದ ಪಾಪಲೋಕಕ್ಕೂ ಹೋಗುತ್ತಾನೆ. ಆದರೆ ಜ್ಞಾನಿಯು ನಿಷ್ಕಾಮಕರ್ಮಮಾಡಿ, ಜನನ ಮರಣ ರಹಿತವಾದ ಮೋಕ್ಷಸಿದ್ಧಿಯನ್ನು ಹೊಂದುತ್ತಾನೆ." ಈ ಉಪದೇಶವನ್ನು ಕೇಳಿ, ಆರ್ತಭಾಗನು ಸ್ತಬ್ಧನಾದನು.

## (೩) ಭುಜ್ಯು ಬ್ರಾಹ್ಮಣ

ಲಹ್ಯಮುನಿಯ ಮೊಮ್ಮಗನಾದ ಎಂದರೆ ಲಾಹ್ಯಋಷಿಯ ಮಗನಾದ ಲಾಹ್ಯಾಯನಿಯಾದ ಭುಜ್ಯುಋಷಿಯು ಯಾಜ್ಞವಲ್ಕ್ಯರನ್ನು

ಕುರಿತು:—“ಯಾಜ್ಞವಲ್ಕ್ಯಮುನಿಗಳೇ, ಪಾರಿಕ್ಷಿತರು ಎಲ್ಲಿ ಇದ್ದಾರೆ? ಎಂದು ಪ್ರಶ್ನೆಯನ್ನು ಕೇಳಿದನು. ಈ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಹೇಳಿದ್ದೇನೆಂದರೆ, ಅಶ್ವಮೇಧಯಾಗವನ್ನು ಮಾಡಿದವರು ಯಾವ ಪುಣ್ಯಲೋಕಕ್ಕೆ ಹೋಗಿದ್ದಾರೆಯೋ ಅದೇ ಲೋಕಕ್ಕೆ ಪಾರಿಕ್ಷಿತರು ಹೋಗಿದ್ದಾರೆ. ಈ ಪ್ರಶ್ನೋತ್ತರದ ತಾತ್ಪರ್ಯವನ್ನು ಯಾಜ್ಞವಲ್ಕ್ಯರು ಹೀಗೆ ಹೇಳಿದರು:—“ಯಾವದೃಷ್ಟಿಯಿಂದ ವಾಯುವು ಸ್ಥಾವರ ಜಂಗಮ ಪ್ರಾಣಿಗಳ ಅಂತರ್ಯಾಮಿಯಾಗಿದ್ದು, ಹೊರಬದಿಯಲ್ಲಿಯೂ ಅದೇ ವಾಯುವು ಸಂಚಾರಮಾಡುತ್ತಿರುತ್ತದೆ. ಎಂದರೆ ವಾಯುವು ವಿವಿಧ ಸ್ಥಳಗಳಲ್ಲಿ ವ್ಯಾಪಿಸಿಕೊಂಡು ಇರುವಂಥ ವ್ಯಷ್ಟಿಸ್ವರೂಪದಲ್ಲಿದೆ. ಹಾಗೆಯೇ ಆ ವಾಯುವು ಸರ್ವತ್ರದಲ್ಲಿ ಹೋಗುವಂಥ ಸಮಷ್ಟಿಸ್ವರೂಪದಲ್ಲಿಯೂ ಇದೆ. (ಮತ್ತು ಆ ವಾಯುವು ಮೃತ್ಯುವನ್ನು ಗೆಲ್ಲುತ್ತದೆ.) ಈ ಜ್ಞಾನವು ಯಾರಿಗೆ ಪ್ರಾಪ್ತವಾಗುತ್ತದೆಯೋ ಅವರೂ ಸಹ ಮೃತ್ಯುವನ್ನು ಗೆಲ್ಲುತ್ತಾರೆ.” ಇದನ್ನು ಕೇಳಿ, ಲಾಹ್ಯಾಯನಿ ಭುಜ್ಯುಋಷಿಯು ಸಂತುಷ್ಟನಾಗಿ ಸ್ವಸ್ಥ ಕುಳಿತನು.

## (೪) ಚಾಕ್ರಾಯಣ ಉಷಸ್ತ ಬ್ರಾಹ್ಮಣ

ಚಕ್ರಋಷಿಯ ಪುತ್ರನಾದ ಚಾಕ್ರಾಯಣ ಉಷಸ್ತನೆಂಬ ಋಷಿಯು ಯಾಜ್ಞವಲ್ಕ್ಯರನ್ನು ಕುರಿತು:—“ಯಾಜ್ಞವಲ್ಕ್ಯಮುನಿಗಳೇ, ಸರ್ವಾಂತರ್ಯಾಮಿಯಾದ ಸಾಕ್ಷಾತ್ ಪರಬ್ರಹ್ಮಸ್ವರೂಪವನ್ನೇ ನನಗೆ ಹೇಳಿರಿ.” ಎಂದು ಪ್ರಶ್ನೆಯನ್ನು ಕೇಳಿದನು. ಇದಕ್ಕೆ ಯಾಜ್ಞವಲ್ಕ್ಯರು ಹೇಳಿದ್ದೇನೆಂದರೆ:—“ಹೇ ಉಷಸ್ತನೆ, ನಿನ್ನ ಆತ್ಮನೇ ಸರ್ವಾನ್ತರ ಎಂದರೆ ಸರ್ವರ ಅಭ್ಯಂತರ ಭಾಗದಲ್ಲಿ ಇದ್ದಾನೆ. ‘ಸರ್ವಾನ್ತರ’ ಈ ವಿಶೇಷಣವನ್ನು ಇಲ್ಲಿ ಸ್ವೀಕರಿಸಿರುವುದು, ಸರ್ವ ವಿಶೇಷಣಗಳ ಉಪಲಕ್ಷಣಾರ್ಥವಾಗಿ ೧ ಇರುತ್ತದೆ. ಆ ಆತ್ಮನು ದೃಷ್ಟಿಗೆ ದೃಷ್ಟಿರೂಪವನ್ನು ಕೊಡ

೧ ಸರ್ವವಿಶೇಷಣೋಪಲಕ್ಷಣಾರ್ಥಂ ಸರ್ವಾನ್ತರ ಗ್ರಹಣಮ್ ।
(ಶಾಂಕರ ಭಾಷ್ಯ)

ತಕ್ಕಂಥವನು, ಕಿವಿಗಳಿಗೆ ಶ್ರವಣಮಾಡಿಸುವಂಥವನು; ಮನಸ್ಸಿನ ಮನನ ಮಾಡತಕ್ಕಂಥವನು; ಬುದ್ಧಿಜನ್ಯಜ್ಞಾನಗಳ ಜ್ಞಾನವನ್ನು ಉತ್ಪನ್ನಮಾಡತಕ್ಕಂಥವನು ಆಗಿದ್ದುದರಿಂದ ಆ ಆತ್ಮನನ್ನು ನೋಡುವುದಕ್ಕೆ ಬರುವುದಿಲ್ಲ; ಕೇಳುವುದಕ್ಕೆ ಬರುವುದಿಲ್ಲ; ಅವನ ಮನನವನ್ನು ಮಾಡುವುದಕ್ಕೆ ಬರುವುದಿಲ್ಲ. ಅರ್ಥಾತ್ ಅವನ ಸ್ವರೂಪಜ್ಞಾನವಾಗುವುದು ಶಕ್ಯವಿಲ್ಲ. ಆ ನಿನ್ನ ಆತ್ಮನು ಸರ್ವಾನ್ತರನಾಗಿದ್ದಾನೆ. ಆ ಆತ್ಮನ ಹೊರತು ಅನ್ಯಸರ್ವವಸ್ತುಗಳು ನಾಶರೂಪವಾಗಿರುತ್ತವೆ." ಈ ಭಾಷಣವನ್ನು ಕೇಳಿ, ಉಷಸ್ತ ಚಾಕ್ರಾಯಣನು ಸ್ತಬ್ಧನಾದನು.

## (೫) ಕೌಷೀತಕೇಯ ಕಹೋಲ ಬ್ರಾಹ್ಮಣ

ಕುಷೀತಕ ಪುತ್ರನಾದ ಕಹೋಲ ಋಷಿಯು ಯಾಜ್ಞವಲ್ಕ್ಯರನ್ನು ಕುರಿತು "ಸರ್ವಾನ್ತರ ಆತ್ಮನಾದ ಪ್ರತ್ಯಕ್ಷ ಮತ್ತು ಸನುಕ್ಷ ಬ್ರಹ್ಮನು ಹೇಗೆ ಇದ್ದಾನೆ?'' ಎಂದು ಪ್ರಶ್ನೆಮಾಡಿದನು. ಇದಕ್ಕೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ:— "ಅವನು ದೇಹಸಂಬಂಧ ಜನಿತ ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು ಇವೆಲ್ಲವುಗಳ ಆಚೆಗೆ ಇದ್ದಾನೆ. ಇಂತಹ ವಿಕಾರಾತೀತನಾದ ಪರಮಾತ್ಮನನ್ನು ತಿಳಿದುಕೊಂಡಂಥ ಜ್ಞಾನಸಂಪನ್ನನಾದ ಬ್ರಾಹ್ಮಣನು, ಪುತ್ರೈಷಣಾ, ವಿತ್ತೈಷಣಾ, ಹಾಗೂ ಲೋಕೈಷಣಾ ಇವುಗಳನ್ನೆಲ್ಲ ತೊರೆದು ಬಿಟ್ಟು, ಕೇವಲ ಶರೀರ ಯಾತ್ರೆಯನ್ನು ಸಾಗಿಸುವುವಕ್ಕೋಸ್ಕರ ಭಿಕ್ಷಾವೃತ್ತಿಯನ್ನು ಸ್ವೀಕರಿಸಿ, ಪೂರ್ಣಪಾಂಡಿತ್ಯದಿಂದ ಆತ್ಮಚಿಂತನದಲ್ಲಿ ತಲ್ಲೀನನಾಗಿ ಬಾಲಸ್ವಭಾವದಿಂದ ಇರುತ್ತಾನೆ. ಹಾಗೂ ಮೌನ ಮತ್ತು ಮೌನಾಭಾವ ಎಂದರೆ ಆತ್ಮಜ್ಞಾನವನ್ನೂ, ಅನಾತ್ಮ ವಸ್ತುಗಳ ಉಪೇಕ್ಷೆಯನ್ನೂ ಧಾರಣ ಮಾಡಿ, ಜೀವಿಸುತ್ತಾನೆ. ಈ ಉದಾತ್ತ ಭಾವನೆಯು ಉತ್ಪನ್ನವಾಯಿತೆಂದರೆ, ಮಿಕ್ಕ ಸರ್ವ ವಸ್ತುಗಳು ನಸ್ವರವಾಗಿಯೂ ದುಃಖಯುಕ್ತವಾಗಿಯೂ ಇರುತ್ತವೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ." ಇದನ್ನು ಕೇಳಿ, ಕುಷೀತಕ ಪುತ್ರ ಕಹೋಲನು ಸ್ವಸ್ಥಚಿತ್ತದಿಂದ ಸುಮ್ಮನೆ ಕುಳಿತನು.

## (೬) ವಾಚಕ್ನವೀ ಗಾರ್ಗೀ ಬ್ರಾಹ್ಮಣ

ಯಾಜ್ಞವಲ್ಕ್ಯರನ್ನು ಕುರಿತು ಮಹಾವಿದುಷಿಯಾದ ವಾಚಕ್ನವೀ ಗಾರ್ಗಿಯು. ಹೀಗೆ ಪ್ರಶ್ನೆಯನ್ನು ಕೇಳಿದಳು:— "ಸರ್ವವಸ್ತುಗಳನ್ನು ಉದಕವು ವ್ಯಾಪಿಸಿದೆ. ಆದರೆ ಆ ಉದಕವನ್ನು ಯಾವುದು ವ್ಯಾಪಿಸಿದೆ?" ಎಂದಳು. ಇದಕ್ಕೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ:— "ಸರ್ವ ಜಡವಸ್ತುಗಳು ಉತ್ಪನ್ನವಾಗುವುದಕ್ಕೆ ಹೇಗೆ ಉದಕವು ಕಾರಣ ವಾಗಿರುತ್ತದೆಯೋ ಹಾಗೆಯೇ ಉದಕವು ಉತ್ಪನ್ನವಾಗುವುದಕ್ಕೆ ವಾಯುವು ಕಾರಣವಾಗಿರುತ್ತದೆ; ಇದೇ ಮೇರೆಗೆ ವಾಯುವಿನ ಕಾರಣವು ಆಕಾಶವಾಗಿದೆ; ಆಕಾಶದ ಕಾರಣವು ಸೂಕ್ಷ್ಮರೂಪದಿಂದ ಇರುವ ಗಂಧರ್ವರ ವಸತಿಸ್ಥಾನವಾಗಿದೆ; ಗಂಧರ್ವ ಲೋಕಕ್ಕೆ ಕಾರಣವು ಆದಿತ್ಯ ಲೋಕ (ಸೂಕ್ಷ್ಮಪ್ರಕಾಶತ್ವ) ವಾಗಿದೆ; ಆದಿತ್ಯಲೋಕಕ್ಕೆ ಕಾರಣವು ಅದ ಕ್ಕಿಂತಲೂ ಸೂಕ್ಷ್ಮಚಂದ್ರ ಪ್ರಕಾಶವಾಗಿದೆ; ಚಂದ್ರಲೋಕಕ್ಕೆ ಕಾರಣವು ಅದಕ್ಕಿಂತಲೂ ಸೂಕ್ಷ್ಮನಕ್ಷತ್ರಪ್ರಕಾಶವಾಗಿದೆ; ನಕ್ಷತ್ರ ಲೋಕಕ್ಕೆ ಕಾರಣವು ದೇವತೆಗಳ ತೇಜವು ಅಥವಾ ದೇವಲೋಕದ ತೇಜವಾಗಿದೆ; ದೇವಲೋಕಕ್ಕೆ ಕಾರಣವು ಇಂದ್ರಲೋಕವು (ಸೂಕ್ಷ್ಮಕ್ರಿಯಾಶಕ್ತಿಯು) ಆಗಿದೆ; ಇಂದ್ರಲೋಕಕ್ಕೆ ಕಾರಣವು ಪ್ರಜಾಪತಿ ಲೋಕವು (ಗೂಢ ಅವ್ಯಕ್ತ ಉತ್ಪಾದನ ಶಕ್ತಿಯು) ಆಗಿದೆ; ಪ್ರಜಾಪತಿ ಲೋಕಕ್ಕೆ ಕಾರಣವು ಬ್ರಹ್ಮಲೋಕವು (ಅವ್ಯಕ್ತ ಈಶ್ವರ ಶಕ್ತಿಯು) ಆಗಿದೆ." ಈ ಪ್ರಕಾರ ಪ್ರಶ್ನಾನುಕ್ರಮದಿಂದ ಯಾಜ್ಞವಲ್ಕ್ಯರು ಉತ್ತರಗಳನ್ನು ಹೇಳಿದರು. ಆದರೆ ಗಾರ್ಗಿಯು ಪುನಃ ಕೇಳಿದ್ದೇನೆಂದರೆ:— "ಆ ಬ್ರಹ್ಮಲೋಕಕ್ಕೆ (ಅವ್ಯಕ್ತ ಈಶ್ವರ ಶಕ್ತಿಗೆ) ವ್ಯಾಪಕವು ಏನು ಇದೆ?" ಆಗ ಯಾಜ್ಞ ವಲ್ಕ್ಯರು ಗಾರ್ಗಿಯನ್ನು ಕುರಿತು:— "ಈ ದೇವತೆಗಳ ವಿಷಯದಲ್ಲಿ ಕೇವಲ ಶ್ರುತಿಪ್ರಮಾಣದಿಂದ ಕೇಳತಕ್ಕದ್ದೇ ಹೊರತು ಅನುಮಾನ ಪದ್ಧತಿಯಿಂದ ಕೇಳತಕ್ಕದ್ದಲ್ಲ. ಈ ದೇವತೆಗಳ ವಿಷಯವನ್ನು ಶ್ರುತಿ ಪ್ರಮಾಣದಿಂದಲೇ ಕೇಳತಕ್ಕದ್ದು; ಕೇವಲ ಶ್ರುತಿಪ್ರಮಾಣದಿಂದಲೇ ತಿಳಿದುಕೊಳ್ಳತಕ್ಕದ್ದು. ಆದ್ದರಿಂದ ನೀನು ಈ ದೇವತೆಗಳ ವಿಷಯ

ದಲ್ಲಿ ಅನುಮಾನ ಪದ್ಧತಿಯಿಂದ ವಿಚಾರಿಸಿ, ಅತಿಪ್ರಶ್ನೆಯನ್ನು ಕೇಳಿದರೆ, ನಿನ್ನ ತಲೆಯು ಒಡೆದು ಹೋಗುವುದೆ"ಂದು ಹೇಳಿದರು. ಕೂಡಲೇ ವಾಚಕ್ನವೀ ಗಾರ್ಗಿಯು ಎಚ್ಚತ್ತು ತೆಪ್ಪಗಾದಳು.

## (೭) ಉದ್ದಾಲಕ ಬ್ರಾಹ್ಮಣ

ಆರುಣೀ ಉದ್ದಾಲಕನು ಯಾಜ್ಞವಲ್ಕ್ಯರನ್ನು ಕುರಿತು:— " ಈ ಲೋಕವು ಮತ್ತು ಪರಲೋಕವು ಹಾಗೂ ಸರ್ವಭೂತಮಾತ್ರಗಳು ಯಾವ ಸೂತ್ರದಿಂದ ಬಂಧಿಸಲ್ಪಟ್ಟಿವೆ ? ಹಾಗೆಯೇ ಇಹ, ಪರ ಸಮಸ್ತ ಲೋಕಗಳಲ್ಲಿಯೂ ಸಮಸ್ತ ಪ್ರಾಣಿಮಾತ್ರಗಳಲ್ಲಿಯೂ ಅಂತರ್ಯಾಮಿಯಾಗಿ ಇದ್ದುಕೊಂಡು, ಇವುಗಳನ್ನೆಲ್ಲ ನಿಯಂತ್ರಣ ಮಾಡುವ ಪುರುಷನು ಯಾರು? ಈ ಸೂತ್ರವನ್ನೂ ಈ ಅಂತರ್ಯಾಮಿಯಾದ ಪುರುಷನನ್ನೂ ಯಾರು ಬಲ್ಲರೋ ಅವರೇ ಬ್ರಹ್ಮಜ್ಞಾನಿಗಳು, ಲೋಕಜ್ಞಾನಿಗಳು, ದೇವಜ್ಞಾನಿಗಳು, ವೇದಜ್ಞಾನಿಗಳು, ಭೂತಜ್ಞಾನಿಗಳು, ಆತ್ಮಜ್ಞಾನಿಗಳು, ಸರ್ವಜ್ಞಾನಿಗಳು ಆದುದರಿಂದ ಈ ಸೂತ್ರವು ಯಾವುದು ? ಈ ಅಂತರ್ಯಾಮಿಯಾದ ಪುರುಷನು ಯಾರು ? " ಎಂದು ಪ್ರಶ್ನೆಯನ್ನು ಕೇಳಿದನು. ಇದಕ್ಕೆ ಯಾಜ್ಞವಲ್ಕ್ಯರು ಹೀಗೆ ಹೇಳಿದರು:— " ಎಲೈ ಗೌತಮನೇ, (ಈ ಸಂಬೋಧನವು ಗೋತ್ರತಃ ಇದೆ.) ವಾಯುವೇ ಆ ಸೂತ್ರವಾಗಿದೆ. ಈ ವಾಯುವಿನಿಂದಲೇ ಈ ಇಹಲೋಕ, ಪರಲೋಕಗಳೂ ಸರ್ವಪ್ರಾಣಿಮಾತ್ರಗಳೂ ಬಂಧಿಸಲ್ಪಟ್ಟಿವೆ. ಎಂದರೆ ಮಾಲೆಯೊಳಗಿನ ಮಣಿಗಳನ್ನು ಹಿಡಿಯುವ ಸೂತ್ರವು ಹೇಗೆ ಇರುತ್ತದೆಯೋ, ಹಾಗೆಯೇ ಜಗತ್ತಿನಲ್ಲಿಯ ಭಿನ್ನಭಿನ್ನ ವಸ್ತುಗಳನ್ನು ಏಕತ್ರ ಹಿಡಿಯುವ ವಾಯುರೂಪವಾದ ಸೂತ್ರವೇ ಇದು; ಆದುದರಿಂದ " ವಾಯುರ್ವೈ ಗೌತಮ ತತ್ಸೂತ್ರಂ " (ಎಂದರೆ ಹೇ ಗೌತಮನೇ, ವಾಯುವೇ ಆ ಸೂತ್ರವಾಗಿದೆ.) ಎಂದು ಆ ಯಾಜ್ಞವಲ್ಕ್ಯರು ಅರ್ಥಪೂರ್ಣವಾದ ಉಕ್ತಿಯಿಂದ ಸಮರ್ಪಕವಾಗಿ ಹೇಳಿ, ತದನಂತರ ಯಾಜ್ಞವಲ್ಕ್ಯರು ಅಂತರ್ಯಾಮಿಯಾಗಿರುವ

ಪುರುಷನು ಯಾರೆಂಬುದನ್ನು ಹೀಗೆ ಹೇಳಲಾರಂಭಿಸಿದರು:— ಪೃಥ್ವಿ, ಆಪ, ಅಗ್ನಿ, ಅನ್ತರಿಕ್ಷ, ವಾಯು, ದ್ಯುಲೋಕ, ಆದಿತ್ಯ, ದಿಶಾ, ಚಂದ್ರ, ನಕ್ಷತ್ರ, ಆಕಾಶ, ಅಂಧಕಾರ, ಪ್ರಕಾಶ ಮುಂತಾದ ದೇವತಾತ್ಮಕ ವಿಭೂತಿಗಳಲ್ಲಿ ಹಾಗೂ ಪಶು, ಪಕ್ಷಿ ಮೊದಲಾದ ಪ್ರಾಣಿಗಳಲ್ಲಿ ಮತ್ತು ಭೌತಿಕ ಪದಾರ್ಥಗಳಲ್ಲಿಯೂ ಶಾರೀರಕ ವಸ್ತುಗಳಾದ ಪ್ರಾಣ, ವಾಣಿ, ಚಕ್ಷು, ಕಿವಿ, ಮನಸ್ಸು, ತ್ವಚೆ, ಜೀವಾತ್ಮನು, (ವಿಜ್ಞಾನ), ರೇತಸ್ಸು ಇತ್ಯಾದಿಗಳಲ್ಲಿ ಒಳಗೆ ಇದ್ದು, ಅವುಗಳ ನಿಯಮನ ಮಾಡುವವನೇ ಅಂತರ್ಯಾಮಿಯಾದ ಪುರುಷನು. ಅವನು ಯಾರ ಕಣ್ಣಿಗೂ ಗೋಚರನಾಗುವುದಿಲ್ಲ; ಆದರೆ ಸ್ವತಃ ತಾನು ಮಾತ್ರ ಎಲ್ಲವನ್ನೂ ನೋಡುತ್ತಾನೆ. ಇದೇ ಪ್ರಕಾರ ಅವನು ಯಾರ ಕಿವಿಗೂ ಗೋಚರನಾಗುವದಿಲ್ಲ; ಪರಂತು ಸ್ವತಃ ತಾನು ಮಾತ್ರ ಎಲ್ಲವನ್ನೂ ಕೇಳುತ್ತಾನೆ. ಮನುಷ್ಯರೆಲ್ಲರೂ ತಾವು ನೋಡಿದ ಹಾಗೂ ಕೇಳಿದ ಸಂಗತಿಗಳನ್ನು ಮಾತ್ರ ತಮ್ಮ ಮನಸ್ಸಿನಲ್ಲಿ ಸಂಕಲ್ಪ ಮಾಡುತ್ತಾರೆ. ಆದರೆ ಸರ್ವಾಂತರ್ಯಾಮಿಯಾದ ಆ ಪುರುಷನನ್ನು ಯಾವ ಮನುಷ್ಯನೂ ನೋಡಿರುವುದಿಲ್ಲ; ಕೇಳಿರುವುದಿಲ್ಲ. ಅತಏವ ಅವನು ಅಮತನಾಗಿದ್ದಾನೆ. ಎಂದರೆ ಯಾರ ಮನಸ್ಸಿನಲ್ಲಿಯ ಸಂಕಲ್ಪದಲ್ಲಿಯೂ ಅವನು ಬರುವುದಿಲ್ಲ; ಆದರೆ ಸ್ವತಃ ಅವನು ಮಾತ್ರ ಎಲ್ಲವನ್ನೂ ಮನನಮಾಡುತ್ತಾನೆ, ಎಂದರೆ ತಿಳಿಯುತ್ತಾನೆ. ಅವನು ಎಲ್ಲರಿಗೂ ಅವಿಜ್ಞಾತನಾಗಿದ್ದಾನೆ. ಆದರೆ ಸ್ವತಃ ಅವನು ಮಾತ್ರ ವಿಜ್ಞಾನ ಶಕ್ತಿಯುಳ್ಳವನಾಗಿದ್ದಾನೆ. ಸಾರಾಂಶ, ಅವನ ಹೊರತು ಇನ್ನಾರೂ ಚೆನ್ನಾಗಿ ನೋಡುವವರಿಲ್ಲ, ಕೇಳುವವರಿಲ್ಲ, ವಿಚಾರಿಸುವವರಿಲ್ಲ ಎಂದರೆ ಮನನ ಮಾಡುವವರಿಲ್ಲ, ತಿಳಿಯುವವರಿಲ್ಲ. ಎಂದರೆ ಅವನ ಹೊರತು ಇನ್ನಾರೂ ದ್ರಷ್ಟಾ, ಶ್ರೋತಾ, ಮನ್ತಾ, ವಿಜ್ಞಾತಾ ಇರುವುದಿಲ್ಲ. ಅವನೇ ನಿನ್ನ ಅನ್ತರ್ಯಾಮಿಯಾದ ಹಾಗೂ ಅಮೃತನಾದ (ಎಂದರೆ ಮರಣಧರ್ಮರಹಿತನಾದ) ಆತ್ಮನಾಗಿದ್ದಾನೆ. ಅವನ ಹೊರತು ಮಿಕ್ಕ ಸರ್ವ ಸಂಗತಿಗಳು ಆರ್ತ ಎಂದರೆ ವಿನಾಶಿಯಾಗಿರುತ್ತವೆ.'' ಈ ಪ್ರಕಾರ ಯಾಜ್ಞವಲ್ಕ್ಯರು ಹೇಳಿದ ರಹಸ್ಯಪೂರ್ಣವಾದ

ಅಧ್ಯಾತ್ಮ ವಿದ್ಯೆಯನ್ನು ಕೇಳಿ, ಆರುಣಿ ಉದ್ದಾಲಕನು ಸ್ವಸ್ಥ ಕುಳಿತನು.

## (೮) ಪುನಃ ಗಾರ್ಗೀ ಬ್ರಾಹ್ಮಣ

ವಚಕ್ನು ಋಷಿಯ ಮಗಳಾದ ಗಾರ್ಗಿಯು, ಸಭೆಯಲ್ಲಿ ಪುನಃ ಎದ್ದುನಿಂತು ಬ್ರಾಹ್ಮಣರನ್ನು ಕುರಿತು ಹೀಗೆ ಭಾಷಣ ಮಾಡಿದಳು:— "ಪೂಜ್ಯ ಬ್ರಾಹ್ಮಣರೇ, ನಿಮ್ಮೆಲ್ಲರ ಒಪ್ಪಿಗೆ ಇದ್ದರೆ, ನಾನು ಯಾಜ್ಞವಲ್ಕ್ಯರನ್ನು ಕುರಿತು ಎರಡು ಪ್ರಶ್ನೆಗಳನ್ನು ಕೇಳುವೆನು. ಅವರು ಆ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಹೇಳಿದರೆ, ನಿಮ್ಮಲ್ಲಿ ಯಾರೊಬ್ಬರೂ ಎಂದೆಂದಿಗೂ ಈ ಬ್ರಹ್ಮಪ್ರತಿಪಾದಕರಾದ ಯಾಜ್ಞವಲ್ಕ್ಯರನ್ನು ಜಯಿಸಲಾರಿರಿ" ಬ್ರಾಹ್ಮಣರೆಲ್ಲರೂ ಈ ಮಾತಿಗೆ ಒಪ್ಪಿ, "ಗಾರ್ಗಿ, ನೀನು ಪ್ರಶ್ನೆಗಳನ್ನು ಕೇಳು" ಎಂದು ನುಡಿದರು.

ಗಾರ್ಗಿಯು, ತಾನು ಕೇಳುವ ಪ್ರಶ್ನೆಗಳು ಅತ್ಯಂತ ಕಠಿಣವಾದವುಗಳೆಂದು ತಿಳಿದು, ವೀರಾವೇಶದಿಂದ ಹೀಗೆ ನುಡಿದಳು:—"ಯಾಜ್ಞವಲ್ಕ್ಯರೇ, ಕಾಶೀದೇಶದ ಅಥವಾ ವಿದೇಹ ದೇಶದ ಶೂರ ಪುತ್ರನು ಬಿಲ್ಲಿಗೆ ಹೆದೆಯನ್ನೇರಿಸಿ, ಅದಕ್ಕೆ ಶತ್ರುವಿಘಾತಕವಾದ ಎರಡು ತೀಕ್ಷ್ಣ ಬಾಣಗಳನ್ನು ಹೂಡಿಕೊಂಡು ಮೈಮೇಲೆ ಬಂದ ಹಾಗೆ, ನಾನು ಎರಡು ಪ್ರಶ್ನೆಗಳನ್ನು ತೆಗೆದುಕೊಂಡು ಬಂದು ನಿಮ್ಮ ಮುಂದೆ ನಿಂತಿದ್ದೇನೆ. ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಹೇಳಿರಿ." ಈ ಗಾರ್ಗಿಯ ಆವೇಶದ ಮಾತುಗಳನ್ನು ಕೇಳಿ, ಯಾಜ್ಞವಲ್ಕ್ಯರು "ಗಾರ್ಗಿಯೇ ನೀನು ಕೇಳತಕ್ಕ ಪ್ರಶ್ನೆಗಳನ್ನು ಅವಶ್ಯವಾಗಿ ಕೇಳು. ಅವುಗಳಿಗೆ ನಾನು ಉತ್ತರವನ್ನು ಹೇಳಲು ಸಿದ್ಧನಿದ್ದೇನೆ." ಎಂದು ನುಡಿದರು.

ಗಾರ್ಗಿಯು ಹೀಗೆ ಪ್ರಶ್ನೆಮಾಡಿದಳು:—"ದ್ಯುಲೋಕದ ಊರ್ಧ್ವಭಾಗದ ಮತ್ತು ಪೃಥ್ವಿಯ ಅಧೋಭಾಗದ ಮಧ್ಯದಲ್ಲಿರುವ ದ್ಯಾವಾ ಪೃಥ್ವಿಗಳು (ಎಂದರೆ ಸ್ವರ್ಗ, ಪೃಥ್ವಿಗಳು), ಭೂತ, ವರ್ತಮಾನ, ಭವಿಷ್ಯತ್ತುಗಳು ಯಾತರಿಂದ ವ್ಯಾಪ್ತವಾಗಿವೆ? ಅಥವಾ

ಯಾತರಲ್ಲಿ ಓತಪ್ರೋತವಾಗಿವೆ?" ಇದಕ್ಕೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ:— "ಹೇ ಗಾರ್ಗೀ, ದ್ಯುಲೋಕದ ಮೇಲ್ಭಾಗದ ಹಾಗೂ ಪೃಥ್ವಿಯ ಕೆಳಭಾಗದ ಮಧ್ಯದಲ್ಲಿದ್ದ ದ್ಯಾವಾ ಪೃಥ್ವಿಗಳು, ಭೂತ, ವರ್ತಮಾನ, ಭವಿಷ್ಯತ್ತುಗಳು ಆಕಾಶದಲ್ಲಿ ಓತಪ್ರೋತವಾಗಿರುತ್ತವೆ."

ಆ ಬಳಿಕ ಗಾರ್ಗಿಯು ಶ್ರೀಯಾಜ್ಞವಲ್ಕ್ಯರಿಗೆ ನಮಸ್ಕರಿಸಿ, ಎರಡನೆಯ ಪ್ರಶ್ನೆಯನ್ನು ಹೀಗೆ ಕೇಳಿದಳು:— "ಆಕಾಶವು ಯಾತರಿಂದ ವ್ಯಾಪ್ತವು? ಅಥವಾ ಆಕಾಶವು ಯಾತರಲ್ಲಿ ಓತಪ್ರೋತವಾಗಿದೆ?" ಇದಕ್ಕೆ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇನೆಂದರೆ:— "ಆಕಾಶವು ಅಕ್ಷರ ತತ್ತ್ವದಿಂದ ವ್ಯಾಪ್ತವಾಗಿದೆ. ಅಥವಾ ಆಕಾಶವು ಅಕ್ಷರ ತತ್ತ್ವದಲ್ಲಿ ಓತಪ್ರೋತವಾಗಿದೆ." ಎಂದು ಹೇಳಿ, ಅಕ್ಷರ ತತ್ತ್ವವನ್ನು ನಿಷೇಧರೂಪವಾದ ಶಬ್ದಗಳಿಂದ ಹೀಗೆ ವರ್ಣಿಸಿದ್ದಾರೆ:— "ಅಕ್ಷರವು (ಎಂದರೆ ಪರಮಾತ್ಮನು) ಸ್ಥೂಲರೂಪದಿಂದಿಲ್ಲ; ಸೂಕ್ಷ್ಮರೂಪದಿಂದಿಲ್ಲ; ಅಣುರೂಪದಿಂದಿಲ್ಲ; ಹ್ರಸ್ವರೂಪದಿಂದಿಲ್ಲ; ದೀರ್ಘರೂಪದಿಂದಿಲ್ಲ; ಅರಕ್ತತೆಯಲ್ಲ, ಸ್ನಿಗ್ಧತೆಯಲ್ಲ, ಛಾಯಾರೂಪವಲ್ಲ, ಅಂಧಕಾರವಲ್ಲ; ವಾಯುವು ಅಲ್ಲ; ಆಕಾಶವಲ್ಲ; ಅಸಂಗವಲ್ಲ; ರಸವಲ್ಲ; ಗಂಧವಲ್ಲ; ನಯನಯುಕ್ತವಲ್ಲ; ಕರ್ಣಯುಕ್ತವಲ್ಲ; ವಾಣಿಯಲ್ಲ; ಮನಸ್ಸಲ್ಲ; ತೇಜಯುಕ್ತವಲ್ಲ; ಪ್ರಾಣವಲ್ಲ; ಆ ಅಕ್ಷರಕ್ಕೆ ಮುಖವಿಲ್ಲ; ಪರಿಮಾಣವಿಲ್ಲ; ಅದಕ್ಕೆ ಅಭ್ಯಂತರವಿಲ್ಲ; ಬಹಿರ್ಭಾಗವಿಲ್ಲ; ಅದು ಏನನ್ನೂ ತಿನ್ನುವುದಿಲ್ಲ; ಮತ್ತು ಅದನ್ನು ಯಾರೂ ತಿನ್ನುವುದಿಲ್ಲ."

ಇನ್ನು, ಯಾಜ್ಞವಲ್ಕ್ಯರು ಅಕ್ಷರವನ್ನು ಸತ್ತಾರೂಪದಿಂದ ಹೀಗೆ ವರ್ಣಿಸಿದ್ದಾರೆ:— "ಸೂರ್ಯ, ಚಂದ್ರ, ದ್ಯಾವಾಪೃಥಿವೀ, ನಿಮೇಷ, ಮುಹೂರ್ತ, ದಿವಸ, ರಾತ್ರಿ, ಪಕ್ಷ, ಮಾಸ ಋತು, ಸಂವತ್ಸರ ಮುಂತಾದ ಕಾಲಮಾನಗಳು ಅಕ್ಷರದ ಆಜ್ಞೆಯಂತೆ ನಡೆದಿರುತ್ತವೆ. ಅದರ ಅಪ್ಪಣೆಯ ಪ್ರಕಾರ ಪೂರ್ವವಾಹಿನಿ, ಪಶ್ಚಿಮವಾಹಿನಿ, ದಕ್ಷಿಣೋತ್ತರವಾಹಿನಿ ಎಲ್ಲ

ನದಿಗಳು ತಮ್ಮ ತಮ್ಮ ದಿಕ್ಕಿನ ಕಡೆಗೆ ಹರಿಯುತ್ತ ನಡೆದಿರುತ್ತವೆ. ಅದರ ಕಟ್ಟಳೆಯಂತೆ ದೇವತೆಗಳು ಯಜ್ಞದ ಹಾಗೂ ಪಿತೃಗಳು ಶ್ರಾದ್ಧ ಹೋಮದ ಅಪೇಕ್ಷೆಯಿಂದ ಇರುತ್ತಾರೆ. ಈ ರೀತಿ ಸರ್ವರ ಪ್ರಶಾಸನ ವನ್ನು ಅಕ್ಷರವು ಮಾಡುತ್ತದೆ. ಹೇ ಗಾರ್ಗಿಯೇ, ಅಕ್ಷರದ ಸಾಕ್ಷಾ ತ್ಕಾರವನ್ನು ಇಲ್ಲವೆ ಅದರ ಜ್ಞಾನವನ್ನು ಮಾಡಿಕೊಳ್ಳದೆ, ಯಾರು ಯಜ್ಞಯಾಗಾದಿಗಳನ್ನು ಮಾಡುತ್ತಾರೆಯೋ, ಯಾರು ಅನೇಕ ಸಹಸ್ರ ವರ್ಷಗಳ ವರೆಗೆ ತಪಸ್ಸನ್ನು ಮಾಡುತ್ತಾರೆಯೋ ಅವರ ಎಲ್ಲ ಫಲ ಗಳು ವ್ಯರ್ಥವಾಗುತ್ತವೆ. ಯಾರು ಈ ಅಕ್ಷರವನ್ನು ತಿಳಿದುಕೊಳ್ಳದೆ, ಸತ್ತು ಹೋಗುತ್ತಾರೆಯೋ ಅವರು ಕೃಪಣರು. ಹೇ ಗಾರ್ಗಿಯೇ, ಯಾರು ಈ ಅಕ್ಷರದ ಸಾಕ್ಷಾತ್ಕಾರ ಮಾಡಿಕೊಂಡು ಮರಣ ಹೊಂದುತ್ತಾ ರೆಯೋ ಅವರು ಬ್ರಾಹ್ಮಣರು, ಎಂದರೆ ಬ್ರಹ್ಮಜ್ಞಾನಿಗಳು." (ಯಾಜ್ಞ ವಲ್ಕ್ಯರು ಆರುಣಿ ಉದ್ದಾಲಕನಿಗೆ ಕೊನೆಯಲ್ಲಿ ಹೇಳಿದಂತೆಯೇ ಇಲ್ಲಿಯೂ ಗಾರ್ಗಿಗೆ ಹೀಗೆ ಹೇಳಿದ್ದಾರೆ.) ಅದರ ಸಾರಾಂಶ ವಾಕ್ಯವೇನೆಂದರೆ: "ಅಕ್ಷರದ ಹೊರತು ಇನ್ನಾರೂ ದ್ರಷ್ಟಾ, ಶ್ರೋತಾ, ಮನ್ತಾ, ವಿಜ್ಞಾತಾ ಇರುವು ದಿಲ್ಲ. ಹೇ ಗಾರ್ಗಿಯೇ, ಈ ಅಕ್ಷರದಲ್ಲಿ ಆಕಾಶವು ಓತ-ಪ್ರೋತವಾ ಗಿದೆ. ಎಂದರೆ ಈ ಅಕ್ಷರದಿಂದ ಈ ಆತ್ಮವಸ್ತುವಿನಿಂದ ಆಕಾಶವು ವ್ಯಾಪ್ತ ವಾಗಿದೆ.''

ಆ ಬಳಿಕ ಗಾರ್ಗಿಯು ಹೀಗೆ ಭಾಷಣ ಮಾಡಿದಳು:-''**ಹೇ ಪೂಜ್ಯ ಬ್ರಾಹ್ಮಣರೇ, ನೀವು ಈ ಯಾಜ್ಞವಲ್ಕ್ಯರಿಗೆ ನಮಸ್ಕಾರಮಾಡಿ, ನಿಮ್ಮ ಮುಕ್ತತೆಯನ್ನು ಮಾಡಿಕೊಂಡರೆ, ನೀವು ಕೃತಕೃತ್ಯರಾದಿ ರೆಂದು ತಿಳಿಯಿರಿ. ನಿಮ್ಮಲ್ಲಿ ಯಾರೂ ಈ ಬ್ರಹ್ಮಜ್ಞಾನಿಗಳಾದ ಯಾಜ್ಞವಲ್ಕ್ಯರನ್ನು ಎಂದಿಗೂ ಜಯಿಸಲಾರಿರಿ.**" ತದನಂತರ ವಾಚಕ್ನವೀ ಗಾರ್ಗಿಯು ಸ್ತಬ್ಧಳಾಗಿ ವಿಶ್ರಾಂತಿಯನ್ನು ಹೊಂದಿದಳು.

### (೯) ಶಾಕಲ್ಯ ಬ್ರಾಹ್ಮಣ

ವಿದಗ್ಧ ಶಾಕಲ್ಯನು ಯಾಜ್ಞವಲ್ಕ್ಯರನ್ನುದ್ದೇಶಿಸಿ ಹೀಗೆ ಪ್ರಶ್ನೆ ಮಾಡಿದನು:— " ಯಾಜ್ಞವಲ್ಕ್ಯರೇ, ಎಷ್ಟು ಜನ ದೇವತೆಗಳಿದ್ದಾರೆ? "

ಇದಕ್ಕೆ ಯಾಜ್ಞವಲ್ಕ್ಯರು:— "ಮೂರು ಸಾವಿರ ಮೂರುನೂರಾ ಆರು ಜನ ದೇವತೆಗಳಿದ್ದಾರೆ. ಇವರಲ್ಲಿ ಮುಖ್ಯರಾದವರು ಯಾರೆಂದರೆ, ಎಂಟು ಜನ ವಸುಗಳು, ಹನ್ನೆರಡು ಜನ ಆದಿತ್ಯರು, ಹನ್ನೊಂದು ಜನ ರುದ್ರರು, ಹಾಗೂ ಇಂದ್ರನೂ ಪ್ರಜಾಪತಿಯೂ ಸೇರಿ ೩೩ ಜನ ದೇವತೆಗಳಿದ್ದಾರೆ. ಇಂದ್ರನು ಪರ್ಜನ್ಯ (=ಮಳೆಯ) ದೇವತೆಯಾಗಿದ್ದಾನೆ. ಮತ್ತು ಪ್ರಜಾಪತಿಯು ಯಜ್ಞದೇವತೆಯಾಗಿದ್ದಾನೆ. ೩೩ ಜನ ದೇವತೆಗಳಲ್ಲಿಯೂ ಆರು ಜನ ದೇವತೆಗಳೇ ಮುಖ್ಯರಾಗಿದ್ದಾರೆ. ಇವರಲ್ಲಿಯೂ ಮೂರು ಜನ ದೇವತೆಗಳು ಮುಖ್ಯರು. ಇವರಲ್ಲಿಯೂ ಪ್ರಾಣ ಅಥವಾ ಬ್ರಹ್ಮ ನಾಮಕ ದೇವನೊಬ್ಬನೇ ಮುಖ್ಯನಾಗಿದ್ದಾನೆ. ಶರೀರದಲ್ಲಿಯ ಪುರುಷನು:—ಕಾಮಪುರುಷ, ಆದಿತ್ಯಪುರುಷ, ಬುದ್ಧಿಪುರುಷ, ಛಾಯಾಮಯ ಪುರುಷ, ಅಕ್ಷಿಪುರುಷ, ಆಪಪುರುಷ. ಪುತ್ರಮಯಪುರುಷ ಎಂಬ ಬೇರೆ ಬೇರೆ ರೂಪಗಳಿಂದ ಇದ್ದಾನೆ. ಪೂರ್ವದಿಶೆಗೆ ಆದಿತ್ಯಪುರುಷನು, ದಕ್ಷಿಣ ದಿಶೆಗೆ ಯಜ್ಞಪುರುಷನು, ಪಶ್ಚಿಮ ದಿಶೆಗೆ ಆಪಪುರುಷನು, ಉತ್ತರ ದಿಶೆಗೆ ಸೋಮಪುರುಷನು, ಊರ್ಧ್ವ ದಿಶೆಗೆ ಅಗ್ನಿಪುರುಷನು ಇದ್ದು, ಇವರೆಲ್ಲರೂ ಮನುಷ್ಯನ ಹೃದಯದಲ್ಲಿ ಇದ್ದಾರೆ." ಎಂದು ಹೇಳಿದರು. ಇದಕ್ಕೆ ಶಾಕಲ್ಯನು:— "ಮನುಷ್ಯನ ಹೃದಯವು ಯಾವ ಕ್ಷೇತ್ರದಲ್ಲಿ ಇದೆ?" ಎಂದು ಛಲವಾದದ ಪ್ರಶ್ನೆಯನ್ನು ಕೇಳಿದನು. ಅತಏವ ಶ್ರೀಯಾಜ್ಞವಲ್ಕ್ಯರು "ಎಲೈ ಅಹಲ್ಲಿಕನೇ ಎಂದರೆ ಎಲೈ ಛಲವಾದಿಯೇ" ಎಂದು ಶಾಕಲ್ಯನನ್ನು ಸಂಬೋಧಿಸಿ, ಅವನನ್ನು ದ್ವೇಶಿಸಿ ಹೀಗೆ ನುಡಿದರು:— "ಮನುಷ್ಯನ ಹೃದಯವು ಮನುಷ್ಯನ ಶರೀರವನ್ನು ಬಿಟ್ಟು, ಬೇರೆ ಕ್ಷೇತ್ರದಲ್ಲಿ ಎಲ್ಲಿಯಾದರೂ ಇರುತ್ತದೆಂದು ನೀನು ತಿಳಿಯುತ್ತೀಯಾ? ಹೀಗೆ ತಿಳಿದರೆ ಮನುಷ್ಯನ ಶರೀರವು ಮೃತಹೊಂದುವುದು; ಮನುಷ್ಯನ ಶರೀರವನ್ನು ಬಿಟ್ಟು, ಬೇರೆ ಸ್ಥಳದಲ್ಲಿದ್ದ ಹೃದಯವನ್ನು ನಾಯಿನರಿಗಳು, ಹದ್ದುಕಾಗೆಗಳು ತಿಂದು, ಚೂರು ಚೂರು ಮಾಡಿ, ಅತ್ತಿಂದಿತ್ತ ಎಳೆದಾಡಬಹುದು. ಇತ್ಯರ್ಥವೇನೆಂದರೆ, ಹೃದಯವು ನಮ್ಮ ಶರೀರದಲ್ಲಿಯೇ ಇದೆ. ಶರೀರದ ನಾಮ

ರೂಪ, ಕರ್ಮಗಳು ಹೃದಯವನ್ನೇ ಅವಲಂಬಿಸಿರುತ್ತವೆ. ಆ ಪರ ಮಾತ್ಮನು ಅಶೀರ್ಯನು, ಅಸಂಗನು, ಅಬದ್ಧನು ಆಗಿದ್ದಾನೆ. ಆದು ರಿಂದ ಅವನು ದುಃಖವನ್ನು ಹೊಂದುವುದಿಲ್ಲ; ವಿನಾಶವನ್ನು ಹೊಂದು ವುದಿಲ್ಲ." ಈ ಪ್ರಕಾರ ಪರಮಾತ್ಮ ಸ್ವರೂಪವನ್ನು ವರ್ಣಿಸಿ, ಯಾಜ್ಞ ವಲ್ಕ್ಯರು ಶಾಕಲ್ಯನಿಗೆ ಹೇಳಿದ್ದೇನೆಂದರೆ:—"ಅಷ್ಟಸ್ಥಾನಗಳು, ಅಷ್ಟ ಲೋಕಗಳು, ಅಷ್ಟದೇವತೆಗಳು, ಅಷ್ಟಪುರುಷರು ಇವರೆಲ್ಲರು ನಮ್ಮ ಹೃದಯದಲ್ಲಿದ್ದಾರೆಂಬುದನ್ನು ಅನುಭವಕ್ಕೆ ತಂದುಕೊಂಡು, ಇವೆಲ್ಲ ಉಪಾಧಿಗಳ ಆಚೆಗೆ ಇದ್ದಂಥ, ಉಪನಿಷತ್ತುಗಳಿಂದ ವರ್ಣಿಸಲ್ಪಟ್ಟಂಥ ಪುರುಷನು ಯಾರೆಂಬುದನ್ನು ನೀನು ಹೇಳದೆ ಹೋದರೆ, ನಿನ್ನ ತಲೆಯು ಕತ್ತರಿಸಿ ಬೀಳುವುದು." ಆದರೆ ಶಾಕಲ್ಯನಿಗೆ ಈ ವಿಜ್ಞಾನದ ಪರಿ ಚಯವೇ ಇರಲಿಲ್ಲವಾದ್ದರಿಂದ ಈ ಆಹ್ವಾನದ ಪ್ರಶ್ನೆಗೆ ಅವನಿಂದ ಉತ್ತರ ಹೇಳುವುದಾಗಲಿಲ್ಲ; ಆದ್ದರಿಂದ ಆ ಶಾಕಲ್ಯನ ತಲೆಯು ಕತ್ತ ರಿಸಿ ಬಿದ್ದಿತು. ಇಷ್ಟೇ ಅಲ್ಲ, ಆ ಶಾಕಲ್ಯನ ಅಸ್ಥಿಗಳನ್ನು ಅವನ ಶಿಷ್ಯರು ಉತ್ತರಕ್ರಿಯೆಯ ಸಂಸ್ಕಾರಕ್ಕೋಸ್ಕರ ಮನೆಯ ಕಡೆಗೆ ಒಯ್ಯುತ್ತಿರು ವಾಗ್ಗೆ, ಕಳ್ಳರು ಆ ಅಸ್ಥಿಗಳನ್ನು ಕಟ್ಟಿದ ಗಂಟನ್ನು (ಧನದ ಗಂಟೆಂದು ತಿಳಿದು) ಕಸಿದುಕೊಂಡು ಹೋದರು.

ಈ ಆಖ್ಯಾಯಿಕೆಯು ಆಚಾರಾರ್ಥವಾಗಿಯೂ ಅಧ್ಯಾತ್ಮವಿದ್ಯೆಯ ಸ್ತುತಿಗೋಸ್ಕರವಾಗಿಯೂ ಇಲ್ಲಿ ಸೂಚಿಸಿದ್ದಾಗಿದೆ. ಎಂದು ಶ್ರೀಶಂಕರಾ ಚಾರ್ಯರು ತಮ್ಮ ಈ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ:- "**ಸೈಷಾಽಽಖ್ಯಾಯಿಕಾಽಽಚಾರಾರ್ಥಂ ಸೂಚಿತಾ ವಿದ್ಯಾ ಸ್ತುತಯೇ ಚೇಹ।**" ಯಾಜ್ಞವಲ್ಕ್ಯರಂಥ ಬ್ರಹ್ಮಜ್ಞಾನಿಗಳ ಸಂಗಡ ನಮ್ರತನದಿಂದ ನಡೆದುಕೊಳ್ಳಬೇಕು.' ಎಂಬ ಆಚಾರವನ್ನು ತಿಳಿಸುವು ದಕ್ಕೋಸ್ಕರವಾಗಿಯೂ ಹಾಗೂ ಈ ಬ್ರಹ್ಮವಿದ್ಯೆಯು ಬಹುಶ್ರೇಷ್ಠ ವಾಗಿದೆ; ಇಂಥ ಬ್ರಹ್ಮವಿದ್ಯಾವಿಶಾರದರಾದ ಯಾಜ್ಞವಲ್ಕ್ಯರಂಥ ಮಹಾ ಜ್ಞಾನಿಗಳನ್ನು ತಿರಸ್ಕರಿಸಿದರೆ ಇಹಲೋಕದಲ್ಲಿ ಅಪಕೀರ್ತಿಯೂ ಪರ

ಲೋಕದಲ್ಲಿ ದುರ್ಗತಿಯೂ ಪ್ರಾಪ್ತವಾಗುತ್ತದೆಂಬುದನ್ನು ವ್ಯಕ್ತಮಾಡುವುದಕ್ಕೋಸ್ಕರವಾಗಿಯೂ ಅತಏವ ಬ್ರಹ್ಮವಿದ್ಯೆಯನ್ನು ಸ್ತುತಿಸುವುದಕ್ಕೋಸ್ಕರವಾಗಿಯೂ ಈ ಆಖ್ಯಾಯಿಕೆಯು ಇಲ್ಲಿ ಸೂಚಿಸಿದ್ದಾಗಿದೆ. ಇತ್ಯರ್ಥವೇನೆಂದರೆ, **ಶ್ರೀಶಂಕರಾಚಾರ್ಯರು ಈ ಆಖ್ಯಾಯಿಕೆಯು ಅರ್ಥವಾದವೆಂದು**೪ **ಸ್ಪಷ್ಟವಾಗಿ ಸೂಚಿಸಿದ್ದಾರೆಂಬುದು ಸಿದ್ಧ.**

ಇಷ್ಟೆಲ್ಲ ವಿವರಣೆಯ ಫಲಿತಾಂಶವೇನೆಂದರೆ, ಜನಕ ರಾಜನ ಸಭೆಯಲ್ಲಿ ಆ ಶಾಕಲ್ಯನು ಅಪಜಯ ಹೊಂದಿದ್ದರಿಂದ ಅವನು ಸಭೆಯಲ್ಲಿ ಮೋರೆಯನ್ನು ಕೆಳಗೆ ಮಾಡಿದನು; ಎಂದರೆ ಜನರಲ್ಲಿ ಅವನು ಅಪಕೀರ್ತಿಯನ್ನು ಹೊಂದಿದನೇ ಹೊರತು, ಅವನ ತಲೆಯು ಕತ್ತರಿಸಿ

---

೪ ಇದೇ ಮಾದರಿಯ ಅರ್ಥವಾದವು, ಈ ಬೃಹದಾರಣ್ಯಕ ಉಪನಿಷತ್ತಿನ ೬ ನೆಯ ಅಧ್ಯಾಯದ ೩ ನೆಯ ಬ್ರಾಹ್ಮಣದ ೭ ರಿಂದ ೧೨ರ ವರೆಗಿನ ಕಂಡಿಕೆಗಳಲ್ಲಿ ಹೇಳಲ್ಪಟ್ಟಿದೆ. ಇದಕ್ಕೆ ಶ್ರೀಶಂಕರಾಚಾರ್ಯರು ಭಾಷ್ಯವನ್ನು ಬರೆದು, ಕೊನೆಯಲ್ಲಿ ಹೀಗೆ ಕಂಠೋಕ್ತವಾಗಿ ಹೇಳಿದ್ದಾರೆ:— " ಧ್ರುವಫಲನಿದಂ ಕರ್ಮೇತಿ ಕರ್ಮಸ್ತುತ್ಯರ್ಥಮೇತತ್ ।" ಎಂದರೆ, ಕರ್ಮವು ನಿಶ್ಚಿತಫಲವನ್ನು ಕೊಡತಕ್ಕದ್ದಾಗಿದೆ; ಎಂದು ಕರ್ಮವನ್ನು ಸ್ತುತಿಸುವುದಕ್ಕೋಸ್ಕರ ಈ ದೃಷ್ಟಾಂತವು ಹೇಳಲ್ಪಟ್ಟಿದೆ. ಅತಏವ ಇದು ಅರ್ಥವಾದವಾಗಿದೆ. ಉದಾಹರಣವು ಯಾವುದೆಂದರೆ; " ಸತ್ಯಕಾಮ ಆಚಾರ್ಯರು ತಮ್ಮ ಶಿಷ್ಯರಿಗೆ ಹೇಳಿದ್ದೇನೆಂದರೆ, ಸಂಸ್ಕಾರಮಾಡಿದ ಈ ಮಂಥವನ್ನು (ಎಂದರೆ ಹಿಟ್ಟನ್ನು) ಗತಪ್ರಾಣವಾದ ಒಣಗಿದ ಕಟ್ಟಿಗೆಗೆ ಹಾಕಿದರೆ, ಜೀವಂತ ವೃಕ್ಷಕ್ಕೆ ಎಲೆಗಳು ಹೇಗೆ ಚಿಗಿಯುತ್ತವೆಯೋ ಹಾಗೆಯೇ ಈ ಶುಷ್ಕ ಸ್ಥಾಣುವಿಗೂ ಟೊಂಗೆಗಳು ಒಡೆದು, ಎಲೆಗಳು ಚಿಗಿಯುವುವು ! ಅಂದ ಬಳಿಕ ಕರ್ಮದಿಂದ ಕರ್ತೃವಿನ ಕಾಮನೆಯು ಎಂದರೆ ಮನೋರಥವು ಪೂರ್ಣವಾಗುವುದು ಇದೇನು ಆಶ್ಚರ್ಯವಲ್ಲ. ಅರ್ಥಾತ್ ಕರ್ಮಕ್ಕೆ ಫಲವು ಸಿಕ್ಕೇಸಿಗುವುದೆಂಬುದೇ ಈ ದೃಷ್ಟಾಂತದ ವ್ಯಂಗ್ಯಾರ್ಥವಾಗಿರುತ್ತದೆಂದು ತಾತ್ಪರ್ಯವು.

ಈ ದೃಷ್ಟಾಂತದಲ್ಲಿ ಶುಷ್ಕಸ್ಥಾಣುವಿಗೆ ಎಲೆಗಳು ಚಿಗಿಯುವುವೆಂದು ಅರ್ಥವಾದಕ್ಕೋಸ್ಕರ ಹೇಳಿದ್ದಾಗಿದೆಯೇ ಹೊರತು ಈ ಸಂಗತಿಯು ವಸ್ತುತಃ ಸತ್ಯವಲ್ಲ.

ಬೀಳಲಿಲ್ಲ; ಅರ್ಥಾತ್ ಆ ಶಾಕಲ್ಯನು ಸಾಯಲಿಲ್ಲ. ಇದೇ ಮೇರೆಗೆ ಆ ಶಾಕಲ್ಯನು ಮಹಾಜ್ಞಾನಿಗಳಾದ ಯಾಜ್ಞವಲ್ಕ್ಯರೊಡನೆ ಛಲವಾದ ಮಾಡಿ, ಅವರನ್ನು ತಿರಸ್ಕರಿಸಿದ್ದರಿಂದ ಅವನು ಮುಂದೆ ಮರಣೋತ್ತರದಲ್ಲಿ ಸದ್ಗತಿಯನ್ನೂ ಹೊಂದಲಿಲ್ಲವೆಂಬುದನ್ನು ವ್ಯಕ್ತಪಡಿಸುವುದಕ್ಕೋಸ್ಕರ ಶಾಕಲ್ಯನ ಎಲುಬುಗಳನ್ನು ಕಳ್ಳರು ಕದ್ದುಕೊಂಡು ಹೋದರೆಂದು ಅತಿಶಯೋಕ್ತಿಯ ವ್ಯಾಜದಿಂದ ಹೇಳಿದ್ದಾಗಿದೆಯೇ ಹೊರತು ಆ ಸಂಗತಿಯು ವಸ್ತುತಃ ಸತ್ಯವಲ್ಲ. ಇದು ಕೇವಲ ಅರ್ಥವಾದವಾಗಿದೆ.

ಇನ್ನು, ನಮ್ಮ ಪ್ರಸ್ತುತ ವಿಷಯದ ಕಡೆಗೆ ಸಾಗುವಾ. ಶಾಕಲ್ಯನು ಅಪಜಯ ಹೊಂದಿ ಕೆಳಗೆ ಕುಳಿತಬಳಿಕ, ಶ್ರೀಯಾಜ್ಞವಲ್ಕ್ಯರು ಆ ಸಭೆಯೊಳಗಿನ ಬ್ರಾಹ್ಮಣರನ್ನುದ್ದೇಶಿಸಿ ಹೀಗೆ ಘೋಷಣೆಯನ್ನು ಮಾಡಿದರು:—"ಅಹೋ ಪೂಜ್ಯಬ್ರಾಹ್ಮಣರೇ, ನಿಮ್ಮಲ್ಲಿ ಯಾರಾದರೂ ಪ್ರಶ್ನೆಗಳನ್ನು ಕೇಳುವವರಿದ್ದರೆ ಅವರು ನನಗೆ ಪ್ರಶ್ನೆಗಳನ್ನು ಕೇಳಲಿ; ಅಥವಾ ನೀವೆಲ್ಲರೂ ಸೇರಿ ನನಗೆ ಪ್ರಶ್ನೆಗಳನ್ನು ಕೇಳಿರಿ. ಇಲ್ಲವೆ ನಿಮ್ಮಲ್ಲಿ ಯಾರಿಗೆ ನಾನು ಪ್ರಶ್ನೆಗಳನ್ನು ಕೇಳಬೇಕೆಂದು ಇಚ್ಛೆಯಿದೆಯೋ ಅವರಿಗೆ ನಾನು ಪ್ರಶ್ನೆಗಳನ್ನು ಕೇಳುತ್ತೇನೆ. ಅಥವಾ ನಿಮ್ಮೆಲ್ಲರಿಗೂ ಸೇರಿ ನಾನು ಪ್ರಶ್ನೆಗಳನ್ನು ಕೇಳುತ್ತೇನೆ." ಆದರೆ ಈ ಆಹ್ವಾನಕ್ಕೆ ಅವರಲ್ಲಿ ಒಬ್ಬ ಬ್ರಾಹ್ಮಣನಿಗೂ ಪ್ರತ್ಯುತ್ತರವನ್ನು ಕೊಡಲು ಧೈರ್ಯವಾಗಲಿಲ್ಲ. ಶಾಕಲ್ಯನ ಜೀವನ್ಮೃತ ಸ್ಥಿತಿಯನ್ನು ನೋಡಿ, ಆ ಎಲ್ಲ ಬ್ರಾಹ್ಮಣರೂ ಆಶ್ಚರ್ಯಚಕಿತರಾಗಿ ಕುಳಿತಿದ್ದರು. ಆಗ ಶ್ರೀಯಾಜ್ಞವಲ್ಕ್ಯರು ಪರಬ್ರಹ್ಮನನ್ನು ವೃಕ್ಷಕ್ಕೆ ಹೋಲಿಸಿ, ಆ ವಿಜ್ಞಾನಮಯ ಬ್ರಹ್ಮನನ್ನು ಕುರಿತು ಪ್ರವಚನವನ್ನು ಹೇಳಿದರು. ಈ ಬ್ರಹ್ಮಜ್ಞಾನವನ್ನು ಆ ಬ್ರಾಹ್ಮಣರೆಲ್ಲರೂ ಕೇಳಿ, ಸಂತುಷ್ಟರಾದರು. ಇದಲ್ಲದೆ ಯಾಜ್ಞವಲ್ಕ್ಯರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೆಂಬುದನ್ನು ಎಲ್ಲರೂ ಒಪ್ಪಿದರು. ಜನಕ ರಾಜನೂ ಸಹ ಶ್ರೀಯಾಜ್ಞವಲ್ಕ್ಯರ ಬ್ರಹ್ಮಜ್ಞಾನಕ್ಕೆ ತಲೆಬಾಗಿ ಅವರನ್ನು ಅತ್ಯಂತ ಆದರದಿಂದ ಸತ್ಕರಿಸಿದನು. ತದನಂತರ

ಆ ಅಶ್ವಮೇಧಯಜ್ಞದ ಕಾರ್ಯಕಲಾಪಗಳೆಲ್ಲ ಯಥಾಸಾಂಗವಾಗಿ ನಡೆದು, ಆ ಬಹುದಕ್ಷಿಣಾಯುಕ್ತ ಯಜ್ಞವು ಪರಿಪೂರ್ಣಸಾಂಗವಾದಮೇಲೆ ಎಲ್ಲ ಬ್ರಾಹ್ಮಣರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.



## ೩ನೆಯ ಅಧ್ಯಾಯ

# ಜನಕರಾಜನಿಗೆ ಜ್ಞಾನೋಪದೇಶ

**ಸ ಹೋವಾಚ ಜನಕೋ ವೈದೇಹೋಽಭಯಂ ತ್ವಾ
ಗಚ್ಛತಾದ್ಯಾಜ್ಞವಲ್ಕ್ಯ ಯೋ ನೋ ಭಗವನ್ನಭಯಂ
ವೇದಯಸೇ ನಮಸ್ತೇಽಸ್ತ್ವಿಮೇ ವಿದೇಹಾ ಅಯಮ-
ಹಮಸ್ಮಿ ೧**

ಒಂದು ದಿವಸ ಯಾಜ್ಞವಲ್ಕ್ಯ ಮಹಾಮುನಿಗಳು ಜನಕನ ಸಭೆಗೆ ಆಗಮಿಸಿದರು. ಆಗ ಜನಕರಾಜನು ಅವರನ್ನು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ ಯಥಾವಿಧಿಯಾಗಿ ಪೂಜಿಸಿ ಸತ್ಕರಿಸಿದನು. ತದನಂತರ ಆ ಸಮ್ರಾಟನು ಮುನಿಗಳಿಗೆ ಹೀಗೆ ಬಿನ್ನವಿಸಿಕೊಂಡನು:—"ಮುನಿಶ್ರೇಷ್ಠರೇ, ತಾವು ಇಲ್ಲಿಗೆ ದಯಮಾಡಿಸಿದ ಕಾರಣವೇನು ? ಗೋ-ಧನದ ಪ್ರಾಪ್ತಿಗೋಸ್ಕರ ಬಂದಿರುವಿರೋ? ಅಥವಾ ನನ್ನ ಪ್ರಶ್ನೆಗಳಿಗೆ ಸೂಕ್ಷ್ಮಾಂತ-ಸೂಕ್ಷ್ಮವಸ್ತುವಿನ ನಿರ್ಣಯವನ್ನು ಹೇಳುವುದಕ್ಕಾಗಿ ಬರೋಣವಾಗಿದೆಯೋ ? ಅಪ್ಪಣೆಕೊಡಿಸಬೇಕು." ಇದಕ್ಕೆ ಯಾಜ್ಞವಲ್ಕ್ಯರು "ಇವೆರಡೂ ಕಾರ್ಯಗಳನ್ನು ನೆರವೇರಿಸುವುದಕ್ಕೋ

---

೧ ಅರ್ಥ:—"ಅಹೋ ಭಗವನ್ ಯಾಜ್ಞವಲ್ಕ್ಯ ಮುನಿಶ್ರೇಷ್ಠರೇ, ತಾವು ನನಗೆ ಅಭಯಬ್ರಹ್ಮನ ಸಾಕ್ಷಾತ್ಕಾರವನ್ನು ಮಾಡಿಕೊಟ್ಟಿರುತ್ತೀರಿ. ತಮಗಾದರೂ ಅಭಯವೇ ಪ್ರಾಪ್ತವಾಗಲಿ. ತಮಗೆ ನಮಸ್ಕರಿಸುತ್ತೇನೆ. ಈ ನಾನು ಮತ್ತು ಈ ವಿದೇಹ ದೇಶವು ತಮ್ಮ ಸ್ವಾಧೀನವಾಗಿರುತ್ತೇವೆ."

(ಬೃಹದಾರಣ್ಯಕ ಅ. ೪, ಬ್ರಾ. ೨, ಶಂ. ೪.)

ಸ್ಕರ ಬಂದಿದ್ದೇವೆ. " ಎಂದು ಉತ್ತರ ಹೇಳಿದರು. ಆಗ ಜನಕರಾಜನು ಹೀಗೆ ಪ್ರಶ್ನೆಯನ್ನು ಮಾಡಿದನು.;—" ಜಿತ್ವಾ ಎಂಬ ನಾಮದ **ಶಿಲಿನನ** ಮಗನಾದ **ಶೈಲಿನಿ**ಯೆಂಬ ಋಷಿಯು " ವಾಕ್ ಇದೇ ಬ್ರಹ್ಮವಾಗಿದೆ." ಎಂದು ಹೇಳಿದ್ದಾನೆ. ಇದಕ್ಕೆ ತಮ್ಮ ಅಭಿಪ್ರಾಯವೇನು ?" ಇದಕ್ಕೆ ಯಾಜ್ಞವಲ್ಕ್ಯರು ಹೇಳಿದ್ದೇನೆಂದರೆ:— " ಹೇ ಸಮ್ರಾಟನೇ, ಹೇಗೆ ಮಾತೃಮಾನ್, (ಯಾವ ಪುತ್ರನಿಗೆ ಅನುಶಾಸನ ಮಾಡುವಂಥ ತಾಯಿಯು ಇದ್ದಾಳೆ, ಅವನು ಮಾತೃಮಾನ್ ಇತ್ಯಾದಿ) ಪಿತೃಮಾನ್, ಆಚಾರ್ಯವಾನ್ ಪುರುಷನು ಹೇಗೆ ಹೇಳಬೇಕೋ ಹಾಗೆ ಜಿತ್ವಾ ಶೈಲಿನಿಯು "ವಾಕ್ ಇದೇ ಬ್ರಹ್ಮವಾಗಿದೆ." ಎಂದು ಹೇಳಿದ್ದಾನೆ. ಆದರೆ ಅವನು ನಿನಗೆ ಆ ಬ್ರಹ್ಮನ ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿದ ನೇನು?" ಇದಕ್ಕೆ ಜನಕನು-"ಅವನು ಅವುಗಳನ್ನು ಹೇಳಲಿಲ್ಲ." ಎಂದು ನುಡಿದನು. ಯಾಜ್ಞವಲ್ಕ್ಯರು ಹೇಳಿದ್ದೇನೆಂದರೆ "ಹೇ ರಾಜನೇ, ಇದು ಏಕಪಾದ್ ಬ್ರಹ್ಮವಾಗಿದೆ." ಆಗ ಜನಕರಾಜನು-"ಹಾಗಾದರೆ ಯಾಜ್ಞ ವಲ್ಕ್ಯ ಮಹಾಮುನಿಗಳೇ ತಾವು ಅದನ್ನು ಹೇಳಿರಿ. " ಈ ಮಾತಿಗೆ ಯಾಜ್ಞವಲ್ಕ್ಯರು ಹೀಗೆ ಹೇಳಿದರು:—" ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸವೇದ, ಇತಿಹಾಸ, ಪುರಾಣ, ವಿದ್ಯಾ, ಉಪ ನಿಷತ್ತುಗಳು, ಶ್ಲೋಕಗಳು, ಸೂತ್ರಗಳು, ಅನುವ್ಯಾಖ್ಯಾನಗಳು, ಅರ್ಥ ವಾದಗಳು, ಇಹಲೋಕ, ಪರಲೋಕಗಳು, ಸರ್ವಪ್ರಾಣಿ ಮಾತ್ರಗಳು ವಾಣಿಯಿಂದಲೇ ಗೊತ್ತಾಗುತ್ತವೆ. ಆದ್ದರಿಂದ ವಾಣಿಯೇ ಪರಬ್ರಹ್ಮ ವಾಗಿದೆ. ಈ ವಾಣಿಯ ಉಪಾಸನೆಯನ್ನು ಮಾಡುವವನು ಪರಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದುತ್ತಾನೆ." ಇದನ್ನು ಕೇಳಿ, ಸಂತೋಷ ಭರಿತನಾಗಿ ಜನಕರಾಜನು-" ಗುರುವರ್ಯರೇ, ತಾವು ನನಗೆ ಈ ಜ್ಞಾನ ವನ್ನು ಉಪದೇಶಮಾಡಿದ್ದಕ್ಕೋಸ್ಕರ ತಮಗೆ ಸಹಸ್ರ ಆಕಳುಗಳನ್ನೂ ಆನೆಯಂಥ ದೊಡ್ಡ ಎತ್ತನ್ನೂ ಕೊಡುತ್ತೇನೆ; ಸ್ವೀಕರಿಸೋಣವಾಗ ಬೇಕು." ಎಂದು ಪ್ರಾರ್ಥಿಸಿಕೊಂಡನು. ಇದಕ್ಕೆ ಯಾಜ್ಞವಲ್ಕ್ಯರು ಹೇಳಿದ್ದೇನೆಂದರೆ:—" ನನ್ನ ತಂದೆಯಾದ ದೇವರಾತನು-' ಶಿಷ್ಯನನ್ನು

ಜ್ಞಾನದಿಂದ ಕೃತಾರ್ಥಮಾಡಿದ ಹೊರತು ಅವನಿಂದ (ಗೋ) ಧನವನ್ನು ಸ್ವೀಕರಿಸಬಾರದು ' ಎಂದು ತಿಳಿಯುತ್ತಿದ್ದನು. ಅದೇ ಪ್ರಕಾರ ನಾನೂ ತಿಳಿಯುತ್ತೇನೆ.'' ಆ ಬಳಿಕ ಇದೇ ಮೇರೆಗೆ ಪ್ರಾಣ, ಚಕ್ಷು, ಕಿವಿ, ಮನಸ್ಸು, ಹೃದಯ, ಮೊದಲಾದವುಗಳಲ್ಲಿ ಪ್ರತಿಯೊಂದು ಪರಮ ಬ್ರಹ್ಮವಾಗಿರುತ್ತ ದೆಂಬುದನ್ನು ಯಾಜ್ಞವಲ್ಕ್ಯರು ವಿಶದಮಾಡಿ ಹೇಳಿದರು.

ಪುನಃ ವೈದೇಹ ಜನಕರಾಜನು ತನ್ನ ಆಸನದಿಂದ ಎದ್ದು, ಶ್ರೀಯಾಜ್ಞವಲ್ಕ್ಯರ ಬಳಿಗೆ ಶಿಷ್ಯಭಾವದಿಂದ ಬಂದು ವಿನಯದಿಂದ ಹೀಗೆ ನುಡಿದನು:—'' ಪರಮ ಪೂಜ್ಯರಾದ ಯಾಜ್ಞವಲ್ಕ್ಯರೇ, ತಮಗೆ ನಾನು ನಮಸ್ಕಾರ ಮಾಡುತ್ತೇನೆ. ನನಗೆ ತಾವು ವೇದಾಂತದ ಉಪ ದೇಶ ಮಾಡುವುದಕ್ಕೆ ಪ್ರಾರಂಭಿಸಬೇಕು." ಆಗ ಯಾಜ್ಞವಲ್ಕ್ಯರು- "ಹೇ ಚಕ್ರವರ್ತಿಯಾದ ಜನಕನೇ, ದೂರದೇಶಕ್ಕೆ ಹೋಗುವವನು ರಥವನ್ನಾಗಲಿ ನಾವನ್ನಾಗಲಿ ಆಶ್ರಯಿಸುವಂತೆ ವೇದಾಧ್ಯಯನವನ್ನು ಮಾಡಿ, ಜ್ಞಾನಸಂಪನ್ನನಾಗಿರುತ್ತೀ. ಆದರೆ ಮರಣೋತ್ತರದಲ್ಲಿ ನೀನು ಎಲ್ಲಿಗೆ ಹೋಗುವೆ ಎಂಬುದು ನಿನಗೆ ಗೊತ್ತಿದೆಯೋ ? '' ಎಂದು ಕೇಳಿ ದರು. ಅದಕ್ಕೆ ಜನಕನು-'' ಭಗವನ್ ಮರಣೋತ್ತರದಲ್ಲಿ ನಾನು ಎಲ್ಲಿಗೆ ಹೋಗುವೆನೆಂಬುದು ನನಗೆ ತಿಳಿದಿಲ್ಲ; ತಾವು ನನಗೆ ಅದನ್ನು ಹೇಳೋಣವಾಗಬೇಕು." ಎಂದು ಬಿನ್ನವಿಸಿಕೊಂಡನು. ಆಗ ಯಾಜ್ಞ ವಲ್ಕ್ಯರು:—'' ನಿನ್ನಲ್ಲಿರುವ ವಿಜ್ಞಾನಘನನಾದ ಪರಮಾತ್ಮನೇ ಮರ ಣೋತ್ತರದಲ್ಲಿ ಉಳಿಯುವನು. ಅವನು 'ನೇತಿ ನೇತಿ' ಎಂದು ನಿಷೇಧ ಮುಖದಿಂದ ತಿಳಿದುಕೊಳ್ಳುವುದಕ್ಕೆ ಯೋಗ್ಯನು. ಆದುದರಿಂದ ಅವನು ಅಗೃಹ್ಯನು. ಎಂದರೆ ಅವನನ್ನು ಯಾರೂ ಗ್ರಹಿಸಲಾರರು; ಅವನು

---

೨ ಒಂದು ಸಾವಿರ ಆಕಳುಗಳ ಗುಂಪಿಗೆ ಒಂದು ಎತ್ತು. ಈ ಕ್ರಮದಿಂದ ಒಂದು ಸಾವಿರ ಎತ್ತುಗಳನ್ನು ಜನಕರಾಜನು ಯಾಜ್ಞವಲ್ಕ್ಯರಿಗೆ ಕೊಟ್ಟನೆಂದು ಕೆಲವರು ಅರ್ಥಮಾಡುತ್ತಾರೆ. ಅರ್ಥಾತ' ಒಂಪು ಸಾವಿರ ಆನೆಯಂಥ ದೊಡ್ಡ ಎತ್ತುಗಳನ್ನೂ ಹತ್ತು ಲಕ್ಷ ಆಕಳುಗಳನ್ನೂ ಯಾಜ್ಞವಲ್ಕ್ಯರಿಗೆ ಕೊಟ್ಟನೆಂದು ಇತ್ಯರ್ಥ.

ಅಶೀರ್ಯನು ಎಂದರೆ ಅವನು ನಾಶಹೊಂದುವುದಿಲ್ಲ; ಆತನು ಅಸಂಗನು ಎಂದರೆ ಅವನು ಆಸಕ್ತನಾಗುವುದಿಲ್ಲ; ಅವನು ಅಬದ್ಧನು ಎಂದರೆ ಆವನು ಬದ್ಧನಾಗುವುದಿಲ್ಲ; ವ್ಯಥೆಯನ್ನು ಹೊಂದುವುದಿಲ್ಲ; ಹಿಂಸೆಯನ್ನು ಹೊಂದುವುದಿಲ್ಲ. ಹೇ ಜನಕರಾಜನೇ, ನೀನು ಅಭಯ ಬ್ರಹ್ಮಪದವನ್ನು ಹೊಂದಿರುತ್ತೀ." ಎಂಮ ಜನಕನಿಗೆ ಜ್ಞಾನೋಪದೇಶವನ್ನು ಮಾಡಿದರು. ಆಗ ಆ ಜನಕನು ಜ್ಞಾನಾನಂದ ಭರಿತನಾಗಿ ಹೀಗೆ ನುಡಿದನು:— "ಅಹೋ, ಭಗವನ್ ಯಾಜ್ಞವಲ್ಕ್ಯ ಮುನೀಂದ್ರರೇ, ತಾವು ನನಗೆ ಅಭಯ ಬ್ರಹ್ಮನ ಸಾಕ್ಷಾತ್ಕಾರವನ್ನು ಮಾಡಿಕೊಟ್ಟಿರುತ್ತೀರಿ. ತಮಗಾದರೂ ಅಭಯವೇ ಪ್ರಾಪ್ತವಾಗಲಿ. ತಮಗೆ ನಮಸ್ಕಾರ ಮಾಡುತ್ತೇನೆ. ಈ ನಾನು ಮತ್ತು ಈ ವಿದೇಹ ದೇಶವು ತಮಗೆ ಅಧೀನವಾಗಿರುತ್ತೇವೆ."

ಆ ಬಳಿಕ ಜನಕರಾಜನು ಯಾಜ್ಞವಲ್ಕ್ಯರನ್ನು ಕುರಿತು:— "ಯಾಜ್ಞವಲ್ಕ್ಯರೇ, ಈ ದೇಹಾಖ್ಯ ಪುರುಷನು ಯಾವ ಜ್ಯೋತಿಯ ಸಾಹಾಯ್ಯದಿಂದ ವ್ಯವಹಾರವನ್ನು ಮಾಡುತ್ತಾನೆ?" ಎಂದು ವಿನಯದಿಂದ ಪ್ರಶ್ನೆಯನ್ನು ಕೇಳಿದನು. ಅದಕ್ಕೆ ಯಾಜ್ಞವಲ್ಕ್ಯರು— "ಸೂರ್ಯನ ಸಾಹಾಯ್ಯದಿಂದ ಅವನು ಎಲ್ಲ ಕರ್ಮಗಳನ್ನು ಮಾಡುತ್ತಾನೆ; ಸೂರ್ಯನು ಅಸ್ತನಾದಾಗ್ಗೆ ಚಂದ್ರನ ಜ್ಯೋತಿಯ ಸಾಹಾಯ್ಯದಿಂದ; ಚಂದ್ರನಿಲ್ಲದ ಕಾಲದಲ್ಲಿ ಅಗ್ನಿಯ ಜ್ಯೋತಿಯ ಸಾಹಾಯ್ಯದಿಂದ; ಅಗ್ನಿಯು ಶಾಂತವಾದ ಕಾಲದಲ್ಲಿ ವಾಣಿಯ ಜ್ಯೋತಿಯ ಸಾಹಾಯ್ಯದಿಂದ; ವಾಣಿಯೂ ಶಾಂತವಾದ ಕಾಲದಲ್ಲಿ ಆತ್ಮನ ಜ್ಯೋತಿಯ ಸಾಹಾಯ್ಯದಿಂದ ಆ ಪುರುಷನು ಕರ್ಮಗಳನ್ನೆಲ್ಲ ಮಾಡುವನು. ಆತ್ಮನು ಪೂರ್ಣ ಜ್ಯೋತಿಃಸ್ವರೂಪನಾಗಿದ್ದಾನೆ. ಪ್ರಾಣದಲ್ಲಿ ವಿಜ್ಞಾನಮಯ ಕೋಶದಲ್ಲಿ ಆತ್ಮನಿದ್ದಾನೆ." ಎಂದು ಜನಕರಾಜನಿಗೆ ಜ್ಞಾನೋಪದೇಶವನ್ನು ಮಾಡಿದರು.

ಬುದ್ಧಿಮಾನನಾದ ಬ್ರಾಹ್ಮಣನು, ಪರಮಾತ್ಮನನ್ನು ಶಾಸ್ತ್ರದಿಂದಲೂ ಆಚಾರ್ಯರ ಉಪದೇಶದಿಂದಲೂ ತಿಳಿದುಕೊಂಡು, ಎಂದರೆ

ಪರಮಾತ್ಮನ ವಿಷಯವಾಗಿ ಪರೋಕ್ಷಶಾಬ್ದಜ್ಞಾನವನ್ನು ಸಂಪಾದಿಸಿಕೊಂಡು, ಅವನ ವಿಷಯದಲ್ಲಿ ಪ್ರಜ್ಞೆಯನ್ನು ಮಾಡತಕ್ಕದ್ದು. ಅರ್ಥಾತ್ ಪರಮಾತ್ಮ ಸಾಕ್ಷಾತ್ಕಾರದ ಸಾಧನಗಳ ಅನುಷ್ಠಾನವನ್ನು ಮಾಡತಕ್ಕದ್ದು. ಹೊರತು ಬಹು ಶಬ್ದಗಳ ಅನುಧ್ಯಾನದಲ್ಲಿಯೇ ಕೇವಲ ಇರಕೂಡದು. ಏಕೆಂದರೆ ಕೇವಲ ಬಹು ಶಬ್ದಗಳ ಅಧ್ಯಯನವು ವಾಣಿಗೆ ಶಿಥಿಲತ್ವವನ್ನುಂಟುಮಾಡುತ್ತದೆ.* ಎಂದರೆ ಗ್ಲಾನಿಯನ್ನುಂಟುಮಾಡುತ್ತದೆ. (ಬೃಹದಾರಣ್ಯಕ ಅ.೪ ಬ್ರಾ ೪, ಕಂಡಿಕಾ ೨೧.) ಪ್ರಾಣದಲ್ಲಿ ವಿಜ್ಞಾನಮಯನಾದ ಆತ್ಮನಿದ್ದಾನೆ. ಅವನು ಸರ್ವರ ಸ್ವಾಮಿಯಾಗಿದ್ದಾನೆ; ಸರ್ವರ ಅಧಿಪತಿಯಾಗಿದ್ದಾನೆ. ಆತನು ಪುಣ್ಯಕರ್ಮದಿಂದ ವೃದ್ಧಿಯನ್ನು ಹೊಂದುವುದಿಲ್ಲ; ಮತ್ತು ಪಾಪಕರ್ಮದಿಂದ ನ್ಯೂನತ್ವವನ್ನು ಹೊಂದುವುದಿಲ್ಲ. ಅವನು ಸರ್ವೇಶ್ವರನಾಗಿದ್ದಾನೆ; ಸಮಸ್ತ ಪ್ರಾಣಿಗಳ ಅಧಿಪತಿಯೂ ಪಾಲಕನೂ ಆಗಿದ್ದಾನೆ. ವರ್ಣಾಶ್ರಮಾದಿ ವ್ಯವಸ್ಥೆಯ ವಿಧಾರಣಮಾಡುವಂಥವನೂ ಜನರ ಅಸಂಭೇದಕ್ಕೋಸ್ಕರ ಕಟ್ಟಿದ ಸೇತುಸ್ವರೂಪನಾದಂಥವನೂ ಆಗಿದ್ದಾನೆ.

ಈ ಪರಮೇಶ್ವರನನ್ನು ಬ್ರಾಹ್ಮಣರು ವೇದಾನುವಚನದಿಂದ ಎಂದರೆ ವೇದಾಧ್ಯಯನದಿಂದ ಹಾಗೂ ಯಜ್ಞದಿಂದ, ದಾನದಿಂದ, ತಪಸ್ಸಿನಿಂದ ತಿಳಿಯುವುದಕ್ಕೆ ಇಚ್ಛಿಸುತ್ತಾರೆ. ಬ್ರಾಹ್ಮಣನು ಈ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಿ ಮುನಿಯಾಗುತ್ತಾನೆ. ಈ ಆತ್ಮಲೋಕದ ಇಚ್ಛೆಯನ್ನು ಮಾಡುವ ಸಂನ್ಯಸನಶೀಲನಾದ ಪುರುಷನು ಸಂನ್ಯಾಸಾಶ್ರಮವನ್ನು ಸ್ವೀಕರಿಸುತ್ತಾನೆ.

ಬ್ರಹ್ಮಜ್ಞಾನಿಯು ಶರೀರಧಾರಣೆಯ ನಿಮಿತ್ತದಿಂದ ನಾನು ಪಾಪವನ್ನು ಮಾಡಿದೆನೆಂದು ಪಶ್ಚಾತ್ತಾಪವನ್ನೂ ಹೊಂದುವುದಿಲ್ಲ; ಪುಣ್ಯವನ್ನು ಮಾಡಿದೆನೆಂದು ಹರ್ಷವನ್ನೂ ಹೊಂದುವುದಿಲ್ಲ. ಸಾರಾಂಶ

---

* ಶ್ರೀವಿದ್ಯಾರಣ್ಯರು ತಮ್ಮ 'ಪಂಚದಶೀ' ಎಂಬ ಗ್ರಂಥದಲ್ಲಿ 'ತೃಪ್ತಿದೀಪ' ಎಂಬ ಅಧ್ಯಾಯದಲ್ಲಿ ೧೦೭ನೆಯ ಶ್ಲೋಕದಲ್ಲಿ ಈ ವಿಚಾರ ಪ್ರಣಾಲಿಯನ್ನು ಸ್ವೀಕರಿಸಿದ್ದಾರೆ.

*

೫ನೆಯ ಅಧ್ಯಾಯ

# ಶ್ರೀಯಾಜ್ಞವಲ್ಕ್ಯರು ರಚಿಸಿದ ಗ್ರಂಥಗಳು



೧ಜ್ಞೇಯಂ ಚಾರಣ್ಯಕಮಹಂ ಯದಾದಿತ್ಯಾದವಾಪ್ತವಾನ್ ।
ಯೋಗಶಾಸ್ತ್ರಂ ಚ ಮತ್ಪ್ರೋಕ್ತಂ ಜ್ಞೇಯಂ ಯೋಗಮಭೀಪ್ಸತಾ॥
(ಯಾಜ್ಞವಲ್ಕ್ಯಸ್ಮೃತಿ ಅ. ೩, ಶ್ಲೋ. ೧೧೦,)

ಶ್ರೀಯಾಜ್ಞವಲ್ಕ್ಯರು ಆದಿತ್ಯಋಷಿಯಿಂದ ಅಧ್ಯಯನಮಾಡಿದಂಥ ಬೃಹದಾರಣ್ಯಕ ಉಪನಿಷತ್ತಿನಲ್ಲಿಯ ಜ್ಞಾನವನ್ನು ನಮ್ಮ ವಾಚಕರಿಗೆ ೨ನೆಯ, ೩ನೆಯ, ೪ನೆಯ ಅಧ್ಯಾಯಗಳಲ್ಲಿ ನಿವೇದನ ಮಾಡಿದ್ದೇವೆ. ಇನ್ನು ಈ ಯಾಜ್ಞವಲ್ಕ್ಯಮಹರ್ಷಿಗಳು ರಚಿಸಿದ ಯೋಗಶಾಸ್ತ್ರವನ್ನೂ ಸ್ಮೃತಿಗ್ರಂಥವನ್ನೂ ಪರಿಚಯ ಮಾಡಿಕೊಡುವುದೇ ಈ ಅಧ್ಯಾಯದ ಉದ್ದೇಶವಾಗಿದೆ.

## (೧) ಯಾಜ್ಞವಲ್ಕ್ಯಸ್ಮೃತಿ

ಶುಕ್ಲಯಜುರ್ವೇದಾಂತರ್ಗತ ಕಾಣ್ವಶಾಖೆಯ ಬ್ರಾಹ್ಮಣರಾದ ಹಾಗೂ ಶೃಂಗೇರಿಮಠದ ಆದ್ಯಜಗದ್ಗುರುಗಳಾದ ಶ್ರೀಸುರೇಶ್ವರಾಚಾ

---

೧ ಅರ್ಥ:—ಇತರ ವಿಷಯಗಳನ್ನು ತಿರಸ್ಕರಿಸಿ, ಚಿತ್ತವೃತ್ತಿಯನ್ನು ಪರಮಾತ್ಮನಲ್ಲಿ ಸ್ಥಿರಮಾಡುವುದೇ ಯೋಗವು. ಈ ಯೋಗದ ಪ್ರಾಪ್ತ್ಯರ್ಥವಾಗಿ ನಾನು ಆದಿತ್ಯಋಷಿಯಿಂದ ಬೃಹದಾರಣ್ಯಕ ಉಪನಿಷತ್ತನ್ನು ಸಂಪಾದಿಸಿದ್ದೇನೆ; ಅದನ್ನು ಅವಶ್ಯವಾಗಿ ತಿಳಿದುಕೊಳ್ಳತಕ್ಕದ್ದು. ಇಷ್ಟೇಅಲ್ಲ ನಾನು ಯೋಗಶಾಸ್ತ್ರವನ್ನು ಸಹ ರಚಿಸಿದ್ದೇನೆ. ಯೋಗಸಿದ್ಧಿಯನ್ನು ಇಚ್ಛಿಸುವವರು ಈ ಯೋಗಶಾಸ್ತ್ರವನ್ನೂ ತಿಳಿದುಕೊಳ್ಳತಕ್ಕದ್ದು.

ರ್ಯರು, ಪೂರ್ವಾಶ್ರಮದಲ್ಲಿ 'ವಿಶ್ವರೂಪ' ಎಂಬ ಹೆಸರಿನಿಂದ ಯಾಜ್ಞವಲ್ಕ್ಯಸ್ಮೃತಿಗೆ ಬಾಲಕ್ರೀಡಾ ನಾಮಕ ಟೀಕೆಯನ್ನು ಬರೆದಿದ್ದಾರೆ. ಈ ಟೀಕಾಗ್ರಂಥವನ್ನು ಮೊನ್ನೆ ಮೊನ್ನೆ ೧೯೨೨ನೆಯ ಇಸವಿಯಲ್ಲಿ ತ್ರಾವಣಕೋರ (ತಿರುವಾಂಕೂರ) ಸಂಸ್ಥಾನದ ಸಂಸ್ಕೃತಗ್ರಂಥ ಪ್ರಕಾಶನ ಕಾರ್ಯಾಧ್ಯಕ್ಷರಾದ ಮಹಾಮಹೋಪಾಧ್ಯಾಯ ಶ್ರೀಮಾನ್ ತ. ಗಣಪತಿಶಾಸ್ತ್ರಿಗಳವರು ಸಂಶೋಧಿಸಿ ಪ್ರಸಿದ್ಧಮಾಡಿದ್ದಾರೆ. ಇವರು ತಾವು ಬರೆದ ಆ ಗ್ರಂಥದ ಉಪೋದ್ಘಾತದಲ್ಲಿ ಹೀಗೆ ಹೇಳಿದ್ದಾರೆ:— "ಮಿತಾಕ್ಷರಾ ನಾಮಕ ಟೀಕೆಯ ಪ್ರಸ್ತಾವನೆಯಲ್ಲಿ ವಿಜ್ಞಾನೇಶ್ವರರು, ವಿಶ್ವರೂಪಾಚಾರ್ಯರು ಬರೆದ 'ಬಾಲಕ್ರೀಡಾ' ಟೀಕೆಯ ಮಹತ್ವವನ್ನೂ ಮತ್ತು ತಾವು ಆ ಗ್ರಂಥಕ್ಕೆ ಋಣಿಯಾದುದನ್ನೂ ಬರೆದಿರುವುದು ಸಂಸ್ಕೃತ ವಾಙ್ಮಯವನ್ನು ಚೆನ್ನಾಗಿ ಪರಿಶೀಲಿಸಿದವರಿಗೆ ವಿದಿತವೇ ಇದೆ. ವಿಜ್ಞಾನೇಶ್ವರರು,

> ಯಾಜ್ಞವಲ್ಕ್ಯಮುನಿಭಾಷಿತಂ ಮುಹುರ್ವಿಶ್ವರೂಪವಿಕಟೋಕ್ತಿ-
> ವಿಸ್ತೃತಮ್ ।
> ಧರ್ಮಶಾಸ್ತ್ರಮೃಜುಭಿರ್ಮಿತಾಕ್ಷರೈರ್ಬಾಲಬೋಧ ವಿಧಯೇ ವಿವಿ-
> ಚ್ಯತೇ ॥

(ವಿಶ್ವರೂಪಾಚಾರ್ಯರ ಪ್ರೌಢವಾದ ಉಕ್ತಿಗಳಿಂದ ವಿಸ್ತೃತವಾಗಿ ವಿವೇಚಿಸಲ್ಪಟ್ಟಂಥ ಶ್ರೀಯಾಜ್ಞವಲ್ಕ್ಯರ ಧರ್ಮಶಾಸ್ತ್ರವನ್ನು ಸುಲಭವಾಗಿ ತಿಳಿಯುವಹಾಗೆ ಚೆನ್ನಾಗಿ ಸಂಕ್ಷಿಪ್ತರೀತಿಯಿಂದ ವಿವೇಚಿಸುವೆನು") ಎಂದು ಹೇಳಿದ್ದಾರೆ.

ಅದೇ ಉಪೋದ್ಘಾತದ ಆರಂಭದಲ್ಲಿ ಶಾಸ್ತ್ರಿಗಳವರು ಹೀಗೆ ಹೇಳಿದ್ದಾರೆ:-"ಅನೇಕ ವರ್ಷಗಳ ಹಿಂದೆ ಶ್ರೀಮನ್ಮಹಾರಾಜರವರ "ಪ್ಯಾಲೇಶ ಲೈಬ್ರರಿ"ಯಲ್ಲಿ ಬ್ರಹ್ಮಚಾರಿ ಪ್ರಕರಣದಲ್ಲಿಯ ಕೆಲವು ಅಂಶಗಳಿಂದ ಪ್ರಾರಂಭವಾದ ಮತ್ತು ಸಮುಪಾತಕ ಪ್ರಕರಣದಿಂದ ಕೊನೆಗೊಂಡ ಬಾಲಕ್ರೀಡಾ ಟೀಕೆಯ ಒಂದು ಹಸ್ತಲಿಖಿತ ಪ್ರತಿಯು ನನ್ನ ದೃಷ್ಟಿಗೆ

ಗೋಚರವಾಯಿತು. ಇದರದೊಂದು ಆದರ್ಶವಾದ ಪುಸ್ತಕವೊಂದನ್ನು ಪ್ರಕಟಿಸಬೇಕೆಂಬ ಲವಲವಿಕೆಯಿಂದ ಸಂಶೋಧನೆಯನ್ನು ಮಾಡಲು, ಮಲೆಯಾಳಿ ಲಿಪಿಯಿಂದ ತಾಡಪತ್ರಗಳ ಮೇಲೆ ಬರೆದ ೫ ಪ್ರತಿಗಳು ನನಗೆ ದೊರಕಿದವು. ಇವುಗಳ ಆಧಾರದಿಂದಲೂ ಅರಮನೆಯ ಗ್ರಂಥಾಲಯದಲ್ಲಿ ಉಪಲಬ್ಧವಾದ ಪುಸ್ತಕದ ಆಧಾರದಿಂದಲೂ ಈ ಬಾಲಕ್ರೀಡಾ ಟೀಕೆಯನ್ನು ಪ್ರಸಿದ್ಧಮಾಡಿದ್ದೇನೆ.

ಈ ಬಾಲಕ್ರೀಡಾ ಟೀಕೆಯ ಪ್ರೌಢತೆಗೆ ಅನುಗುಣವಾದ ೩ ಉಪಟೀಕಾ ಗ್ರಂಥಗಳೂ ಇವೆ. ಈ ಬಾಲಕ್ರೀಡಾ ಟೀಕೆಯಲ್ಲಿ ಕ್ರಿಸ್ತವರ್ಷದ ಈಚೆಗೆ ಆಗಿಹೋದ ಗ್ರಂಥಕಾರರಿಂದಾಗಲಿ ಗ್ರಂಥಗಳಿಂದಾಗಲಿ ಉದಾಹರಣೆಗಳನ್ನು ತೆಗೆದುಕೊಂಡಿರುವುದಿಲ್ಲ; ಕ್ರಿಸ್ತಪೂರ್ವದಲ್ಲಿ ಆಗಿಹೋದ ಗ್ರಂಥಕಾರರ ಗ್ರಂಥಗಳಿಂದ ಉದಾಹರಣೆಗಳನ್ನು ತೆಗೆದುಕೊಂಡಿದ್ದಾರೆ. ಉದಾ:— ಅರ್ಥಶಾಸ್ತ್ರದ ವಿಷಯವೊಂದನ್ನು ಕುರಿತು ಉದಾಹರಣೆಯನ್ನು ಹೇಳುವಾಗ ಕೌಟಿಲೀಯ ಅರ್ಥಶಾಸ್ತ್ರದಿಂದ ಉದಾಹರಣೆಯನ್ನು ಹೇಳದೆ, ಕೌಟಿಲ್ಯನಿಗಿಂತಲೂ ಪ್ರಾಚೀನಕಾಲದವರಾದ ಬೃಹಸ್ಪತಿ ಮತ್ತು ವಿಶಾಲಾಕ್ಷ ಇವರಿಬ್ಬರ ಗ್ರಂಥಗಳಿಂದ ವಚನಗಳನ್ನು ಉದ್ಧೃತ ಮಾಡಿದ್ದಾರೆ. ಸಾರಾಂಶ ಈ ವಿಶ್ವರೂಪಾಚಾರ್ಯ ಪ್ರಣೀತ ಬಾಲಕ್ರೀಡಾ ಟೀಕೆಯು ಅತ್ಯಂತ ಪ್ರಾಚೀನವಾದದ್ದೆಂದು[೨] ಇತ್ಯರ್ಥ. ”

ಇದರ ತರುವಾಯ ಕಲ್ಯಾಣದ ಚಾಳುಕ್ಯ ಚಕ್ರವರ್ತಿಯಾದ ೬ನೆಯ ವಿಕ್ರಮಾದಿತ್ಯನ (ಕ್ರಿ. ವ. ೧೦೭೬—೧೧೨೬) ಮಂತ್ರಿಯಾದ

---

೨ ಶ್ರೀಸುರೇಶ್ವರಾಚಾರ್ಯರು ಕ್ರಿ. ಪೂ. ೨೬ರಲ್ಲಿ ಎಂದರೆ ವಿಕ್ರಮಸಂವತ್ ೩೦ರಲ್ಲಿ ಶೃಂಗೇರಿಮಠದ ವ್ಯಾಖ್ಯಾನಸಿಂಹಾಸನವನ್ನು ಆರೋಹಣ ಮಾಡಿದರೆಂದು ಶೃಂಗೇರಿ ಮಠದಲ್ಲಿ ಲೇಖವಿದೆ. ಈ ಲೇಖದ ಆಧಾರದಿಂದ ಶ್ರೀ ಸುರೇಶ್ವರಾಚಾರ್ಯರು ಎಂದರೆ ವಿಶ್ವರೂಪಾಚಾರ್ಯರು ಕ್ರಿಸ್ತಪೂರ್ವ ೧ನೆಯ ಶತಮಾನದಲ್ಲಿ ಆಗಿಹೋದರೆಂಬುದನ್ನು ಶ್ರೀಸುರೇಶ್ವರಾಚಾರ್ಯರ ಚರಿತ್ರೆಯ ೧ನೆಯ ಪರಿಶಿಷ್ಟದಲ್ಲಿ ಸಿದ್ಧಮಾಡಿದ್ದೇವೆ.

ವಿಜ್ಞಾನೇಶ್ವರ ಪಂಡಿತನು ಯಾಜ್ಞವಲ್ಕ್ಯ ಸ್ಮೃತಿಗೆ ಮಿತಾಕ್ಷರಾ ನಾಮಕ ಟೀಕೆಯನ್ನು ಬರೆದಿದ್ದಾನೆಂಬುದನ್ನು ಮೇಲೆಯೇ ಹೇಳಿದ್ದೇವೆ. ಬಂಗಾಲ ಪ್ರಾಂತದ ವ್ಯತಿರಿಕ್ತ ಸಮಸ್ತ ಹಿಂದುಸ್ಥಾನದಲ್ಲಿ ಈ ಮಿತಾಕ್ಷರಾ ಟೀಕೆಯು ಹಿಂದೂ ಕಾಯದೆ ಕಾನೂನಿಗೆ ಪ್ರಮಾಣಾರ್ಹ ಗ್ರಂಥವಾಗಿದೆ. ಈಗಿನ ಬ್ರಿಟಿಶ ಕೋರ್ಟುಗಳಲ್ಲಿ ಸಹ ಈ ಗ್ರಂಥಕ್ಕೆ ಮಾನ್ಯತೆಯಿದೆ. ಈಗಿನ "ಹಿಂದು ಲಾ'' ಎಂಬ ಗ್ರಂಥವು ಈ ಯಾಜ್ಞವಲ್ಕ್ಯಸ್ಮೃತಿಯ ಆಧಾರ ದಿಂದಲೇ ರಚಿಸಲ್ಪಟ್ಟಿದೆ. ಪಾಶ್ಚಾತ್ಯ ಕಾಯಿದೆ ಪಂಡಿತರೂ ಕೂಡ ಈ ಗ್ರಂಥಕ್ಕೆ ಮಾನವನ್ನು ಕೊಡುತ್ತಾರೆ.

ಈ ಮಿತಾಕ್ಷರಾ ಟೀಕೆಯ ತರುವಾಯ ಅಪರಾದಿತ್ಯನೆಂಬ ಶಿಲಾಹಾರ ರಾಜನು, ಈ ಯಾಜ್ಞವಲ್ಕ್ಯ ಸ್ಮೃತಿಗೆ 'ಅಪರಾರ್ಕ' ಎಂಬ ವಿದ್ವತ್ತಾಪೂರ್ಣವಾದ ಟೀಕೆಯನ್ನು ಬರೆದಿದ್ದಾನೆ.

ಆ ಪ್ರಾಚೀನಕಾಲದಲ್ಲಿ ಯಾಜ್ಞವಲ್ಕ್ಯಸ್ಮೃತಿಗೆ ವಿಶ್ವರೂಪಾಚಾರ್ಯರು ಬರೆದ ಬಾಲಕ್ರೀಡಾ ಟೀಕೆಯು ಅತಿಶಯ ಪ್ರೌಢತೆಯನ್ನು ಹೊಂದಿತ್ತು. ಅರ್ಥಾತ್ ಆಚಾರ, ವ್ಯವಹಾರ, ಪ್ರಾಯಶ್ಚಿತ್ತ ಮೊದಲಾದ ವಿಷಯಗಳ ಬಗ್ಗೆ ಪ್ರಮಾಣಭೂತವಾದ ಗ್ರಂಥವಾಗಿತ್ತು. ಈ ಬಾಲಕ್ರೀಡಾ ಟೀಕೆಗೆ ಉಪಟೀಕೆಯನ್ನು ಬರೆದ ವಿಭಾವನಾಕಾರರು, ವಿಶ್ವರೂಪಾಚಾರ್ಯರ ಅರ್ಥಾತ್ ಅವರ ಬಾಲಕ್ರೀಡಾ ಟೀಕೆಯ ಯೋಗ್ಯತೆಯನ್ನು ಹೀಗೆ ವರ್ಣಿಸಿದ್ದಾರೆ:—

ಯತ್ಪ್ರಸಾದಾದಯಂ ಲೋಕೋ ಧರ್ಮಮಾರ್ಗಸ್ಥಿತಃ ಸುಖೀ ।
ಭವಭೂತಿ **ಸುರೇಶಾಖ್ಯಂ ವಿಶ್ವರೂಪಂ** ಪ್ರಣಮ್ಯ ತಮ್॥

( ಅರ್ಥ:—ಯಾವ ವಿಶ್ವರೂಪಾಚಾರ್ಯರ ಪ್ರಸಾದದಿಂದ ಎಲ್ಲ ಜಗತ್ತು ಧರ್ಮಮಾರ್ಗವನ್ನು ಅನುಸರಿಸಿ ಸುಖವಾಗಿದೆಯೋ ಅಂಥ ಭವಭೂತಿ ಎಂದರೆ ಶ್ರೀಶಂಕರಾಚಾರ್ಯ ಕರಕಮಲಸಂಜಾತರಾದ ಸುರೇಶ್ವರ ನಾಮಕರಾದ ವಿಶ್ವರೂಪಾಚಾರ್ಯರನ್ನು ನಮಸ್ಕರಿಸಿ,)

ವಿಭಾವನಾಕಾರರ ಈ ಉಕ್ತಿಯಿಂದ ವಿಶ್ವರೂಪಾಚಾರ್ಯರು ಮತ್ತು ಶ್ರೀಸುರೇಶ್ವರಾಚಾರ್ಯರು ಒಬ್ಬರೇ ಎಂಬುದು ಸ್ಪಷ್ಟವಾಗಿ ವ್ಯಕ್ತ

ವಾಗುತ್ತದೆ. ಈ ಉಕ್ತಿಯಲ್ಲಿದ್ದ 'ಸುರೇಶ' ಎಂಬ ಶಬ್ದವು, ಸುರೇಶ್ವರಾಚಾರ್ಯರನ್ನೇ ಉದ್ದೇಶಿಸಿ ಇದ್ದು, ಇದು ಕೇವಲ ಛಂದಸ್ಸಿನ ಅನುಕೂಲತೆಯ ಸಲುವಾಗಿ ಹಾಗೆ ಬರೆದದ್ದಾಗಿದೆ.

"ಜ್ಞೇಯಂ ಚಾರಣ್ಯಕಮಹಂ ಯದಾದಿತ್ಯಾದವಾಪ್ತವಾನ್೧ ।
(ಯಾಜ್ಞವಲ್ಕ್ಯಸ್ಮೃತಿ ೩।೧೧೦)

ಅರ್ಥ:—ನಾನು ಬೃಹದಾರಣ್ಯಕ ಉಪನಿಷತ್ತನ್ನು ಆದಿತ್ಯಋಷಿಯಿಂದ ಸಂಪಾದಿಸಿದ್ದೇನೆ. ಅದನ್ನು ಅಧ್ಯಯನಮಾಡಿ ತಿಳಿದುಕೊಳ್ಳತಕ್ಕದ್ದು.

ಶ್ರೀಸುರೇಶ್ವರಾಚಾರ್ಯರೂ ವಿಜ್ಞಾನೇಶ್ವರ ಪಂಡಿತರೂ ಈ ಶ್ಲೋಕಕ್ಕೆ ಟೀಕೆಯನ್ನು ಬರೆಯುವಾಗ್ಗೆ ಈ ಶ್ಲೋಕದಲ್ಲಿದ್ದ 'ಆರಣ್ಯಕ' ಎಂಬ ಶಬ್ದಕ್ಕೆ 'ಬೃಹದಾರಣ್ಯಕ' ಎಂದೇ ಅರ್ಥಮಾಡಿದ್ದಾರೆ. ಅರ್ಥಾತ್ ಆದಿತ್ಯಋಷಿಯಿಂದ ಬೃಹದಾರಣ್ಯಕ ಉಪನಿಷತ್ತನ್ನು ಸಂಪಾದಿಸಿದಂಥ ವೇದಕಾಲೀನ ಯಾಜ್ಞವಲ್ಕ್ಯರೇ ಈ ಸ್ಮೃತಿಯ ಕರ್ತೃಗಳೆಂಬುದನ್ನು ಸ್ಪಷ್ಟಮಾಡಿದ್ದಾರೆ. ಬಲವತ್ತರವಾದ ಈ ಆಂತರ ಪ್ರಮಾಣದಿಂದ ಈ ಸ್ಮೃತಿಯು ವೇದಕಾಲೀನ ಯಾಜ್ಞವಲ್ಕ್ಯಪ್ರಣೀತವೆಂಬುದು ಚೆನ್ನಾಗಿ ನಿಷ್ಪನ್ನವಾಯಿತು.

ಯೋಗೀಶ್ವರಂ ಯಾಜ್ಞವಲ್ಕ್ಯಂ ಸಂಪೂಜ್ಯ ಮುನಯೋಽ-
ಬ್ರುವನ್
ವರ್ಣಾಶ್ರಮೇತರಾಣಾಂ ನೋ ಬ್ರೂಹಿ ಧರ್ಮಾನಶೇಷತಃ ॥
(ಯಾಜ್ಞವಲ್ಕ್ಯಸ್ಮೃತಿ ೧।೧)

ಅರ್ಥ:—ಯೋಗಿಶ್ರೇಷ್ಠರಾದಂಥ ಯಾಜ್ಞವಲ್ಕ್ಯಮಹಾಮುನಿಗಳ ಬಳಿಗೆ ಅನೇಕಜನ ಋಷಿಗಳು ಬಂದು, ಆ ಯೋಗೀಶ್ವರರನ್ನು ಭಕ್ತಿ

---

(೧) ವಿಶ್ವರೂಪಾಚಾರ್ಯಕೃತ ಬಾಲಕ್ರೀಡಾ ನಾಮಕ ಟೀಕೆಯ ಯಾಜ್ಞವಲ್ಕ್ಯಸ್ಮೃತಿಯಲ್ಲಿ ಈ ಶ್ಲೋಕವು ೩ನೆಯ ಅಧ್ಯಾಯದ ೧೧೯ನೆಯ ಶ್ಲೋಕವಾಗಿದೆ. ಮಿತಾಕ್ಷರಾ ನಾಮಕ ಟೀಕೆಯ ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ೧೧೦ನೆಯದಾಗಿದೆ.

ಯಿಂದ ಪೂಜಿಸಿ, ಆ ಋಷಿವರ್ಯರು ಯಾಜ್ಞವಲ್ಕ್ಯರನ್ನು ಕುರಿತು ಹೀಗೆ ಬಿನ್ನವಿಸಿಕೊಂಡರು:—“ ಪರಮಪೂಜ್ಯರಾದ ಯೋಗೀಶ್ವರರೇ, ತಾವು ಬ್ರಾಹ್ಮಣಾದಿ ವರ್ಣಗಳ, ಬ್ರಹ್ಮಚರ್ಯಾಶ್ರಮಪ್ರಭೃತಿ ಆಶ್ರಮಗಳ ಹಾಗೂ ವರ್ಣಸಂಕರವಾಗಿ ಉತ್ಪನ್ನವಾದಂಥ ಜಾತಿಗಳ ಸರ್ವಧರ್ಮಗಳನ್ನು ಹೇಳಿರಿ. ” ಈ ವಿನಂತಿಯನ್ನು ಮಾನ್ಯಮಾಡಿ, ಆ ಋಷಿಗಳಿಗೆ ಶ್ರೀಯಾಜ್ಞವಲ್ಕ್ಯಯೋಗೀಂದ್ರರು ಸಮಸ್ತಧರ್ಮಗಳನ್ನು ಉಪದೇಶ ಮಾಡಿದರು. ಯಾಜ್ಞವಲ್ಕ್ಯರ ಈ ಉಪದೇಶವೇ ಯಾಜ್ಞವಲ್ಕ್ಯಸ್ಮೃತಿಯಾಗಿದೆ.

ಈ ರೀತಿ ವೇದಕಾಲೀನ ಯಾಜ್ಞವಲ್ಕ್ಯರೇ ಈ ಸ್ಮೃತಿಯ ಕರ್ತೃವಾಗಿದ್ದಾರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿರುತ್ತದೆ. ಅತಏವ ಇದು ಐತಿಹಾಸಿಕ ಸತ್ಯವಾದುದರಿಂದ ಶುಕ್ಲಯಜುರ್ವೇದದ ಪಾರಸ್ಕರ ಗೃಹ್ಯಸೂತ್ರದ ಮೇಲೆ ಈ ಯಾಜ್ಞವಲ್ಕ್ಯ ಸ್ಮೃತಿಯಿಂದ ಬಹಳೇ ಪರಿಣಾಮವಾಗಿರುತ್ತದೆಂಬುದು ಸಿದ್ಧ. ಆದ್ದರಿಂದ ಕೆಲವರು ಆಧುನಿಕರು ಯಾಜ್ಞವಲ್ಕ್ಯ ಸ್ಮೃತಿಯು ಇತ್ತೀಚಿಗೆ ರಚಿಸಲ್ಪಟ್ಟಿರುತ್ತದೆಂದು ನಿರಾಧಾರವಾಗಿ ಊಹಿಸಿ, ಈ ಯಾಜ್ಞವಲ್ಕ್ಯ ಸ್ಮೃತಿಯ ಮೇಲೆ ಪಾರಸ್ಕರ ಗೃಹ್ಯಸೂತ್ರದಿಂದ ಬಹಳೇ ಪರಿಣಾಮವಾದಂತೆ ತೋರುತ್ತದೆಂದು ಬರೆದಿರುವುದು ಸರ್ವಥೈವ ಅನೈತಿಹಾಸಿಕವಾಗಿದೆ.

ಈ ಯಾಜ್ಞವಲ್ಕ್ಯ ಸ್ಮೃತಿಯ ಮಿತಾಕ್ಷರಾ ನಾಮಕ ಟೀಕೆಯಿಂದ ಈಗಿನ “ಹಿಂದೂ ಲಾ” ಗ್ರಂಥವು ರಚಿಸಲ್ಪಟ್ಟಿದ್ದರಿಂದ ಈ ಸ್ಮೃತಿಗೆ ಬ್ರಿಟಿಶ ಕೋರ್ಟುಗಳಲ್ಲಿ ಮಾನ್ಯತೆಯನ್ನು ಕೊಟ್ಟಿದ್ದಾರೆ. ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಇನ್ನು, ಕಾಣ್ವ, ಮಾಧ್ಯಂದಿನ, ತೈತ್ತಿರೀಯ, ಶಾಕಲ ಪ್ರಭೃತಿ ಸಮಸ್ತ ಶಾಖೆಗಳ ಬ್ರಾಹ್ಮಣರೂ ಪ್ರತಿದಿವಸ ಬ್ರಹ್ಮಯಜ್ಞದ ಕಾಲಕ್ಕೆ “ಯೋಗೀಶ್ವರಂ ಯಾಜ್ಞವಲ್ಕ್ಯಂ” ಎಂಬ ಈ ಯಾಜ್ಞವಲ್ಕ್ಯಸ್ಮೃತಿಯ ಆದ್ಯಶ್ಲೋಕವನ್ನು ಗೌರವಪುರಸ್ಸರವಾಗಿ ಪಠಿಸಿ, ಶ್ರೀಯಾಜ್ಞವಲ್ಕ್ಯರ ವಿಷಯವಾಗಿಯೂ ಈ ಯಾಜ್ಞವಲ್ಕ್ಯ ಸ್ಮೃತಿಯ ವಿಷಯವಾಗಿಯೂ ಪೂಜ್ಯಭಾವವನ್ನು ವ್ಯಕ್ತಪಡಿಸುತ್ತಾರೆ.

## (೨) ಯೋಗಶಾಸ್ತ್ರ

ಯೋಗಶಾಸ್ತ್ರಂಚ ಮತ್ಪ್ರೋಕ್ತಂ ಜ್ಞೇಯಂ ಯೋಗಮಭೀಪ್ಸತಾ||

(ಯಾಜ್ಞವಲ್ಕ್ಯ ಸ್ಮೃತಿ ೩|೧೧೦)

ಅರ್ಥ:— ನಾನು ಯೋಗಶಾಸ್ತ್ರವನ್ನು ಹೇಳಿದ್ದೇನೆ. (ಎಂದರೆ ಬರೆದಿದ್ದೇನೆ.) ಅದನ್ನು ಯೋಗದ ಇಚ್ಛೆಯನ್ನು ಮಾಡುವವರು ಓದಿ ತಿಳಿದುಕೊಳ್ಳತಕ್ಕದ್ದು.

ಶ್ರೀಯಾಜ್ಞವಲ್ಕ್ಯರು ಬರೆದ ಯೋಗಶಾಸ್ತ್ರವು.“**ಯೋಗಯಾಜ್ಞವಲ್ಕ್ಯಮ್**” ಎಂಬ ಹೆಸರಿನಿಂದ ಮುದ್ರಿಸಿ ಪ್ರಸಿದ್ಧವಾಗಿಯೇ ಇದೆ. ಶ್ರೀಯಾಜ್ಞವಲ್ಕ್ಯರು ಯೋಗಶಾಸ್ತ್ರದಲ್ಲಿ ನಿಷ್ಣಾತರಾಗಿದ್ದರೆಂಬುದು ಮೇಲೆ ಉಲ್ಲೇಖಿಸಿದ ಯಾಜ್ಞವಲ್ಕ್ಯ ಸ್ಮೃತಿಯಲ್ಲಿಯ ೧೧೦ನೆಯ ಶ್ಲೋಕವನ್ನೂ ಅದರ ಹಿಂದಿನ ೧೦೮|೧೦೯ನೆಯ ಶ್ಲೋಕಗಳನ್ನೂ ನೋಡಿದರೆ ಸಾಕು, ಚೆನ್ನಾಗಿ ವ್ಯಕ್ತವಾಗುತ್ತದೆ. ಅದು ಹೇಗೆ ಎಂದರೆ:—

ದ್ವಾಸಪ್ತತಿ ಸಹಸ್ರಾಣಿ ಹೃದಯಾದಭಿನಿಃಸೃತಾಃ ||
ಹಿತಾಹಿತಾನಾಮ ನಾಡ್ಯಸ್ತಾಸಾಂ ಮಧ್ಯೇ ಶಶಿಪ್ರಭವಮ್ ||೧೦೮||
ಮಣ್ಡಲಂ ತಸ್ಯ ಮಧ್ಯಸ್ಥ ಆತ್ಮಾ ದೀಪ ಇವಾಚಲಃ |
ಸ ಜ್ಞೇಯಸ್ತಂ ವಿದಿತ್ವೇಹ ಪುನರಾಜಾಯತೇ ನ ತು ||೧೦೯||
ಜ್ಞೇಯಂಚಾರಣ್ಯಕಮಹಂ ಯದಾದಿತ್ಯಾದವಾಪ್ತವಾನ್ |
ಯೋಗಶಾಸ್ತ್ರಂ ಚ ಮತ್ಪ್ರೋಕ್ತಂ ಜ್ಞೇಯಂ ಯೋಗಮಭೀ-
ಪ್ಸತಾ || ೧೧೦ ||

ಅರ್ಥ:— ‘ಹಿತಾ’ ಎಂಬ ಹೆಸರಿನ ೭೨ ಸಾವಿರ ನಾಡಿಗಳು * ಹೃದಯದಿಂದ ಹೊರಟು ಶರೀರವನ್ನೆಲ್ಲ ವ್ಯಾಪಿಸುತ್ತವೆ. ಇವುಗಳ

* ಮನುಸ್ಮೃತಿಯ ಆದಿಯಲ್ಲೂ ಇದೇ ಪದ್ಧತಿಯು ದೃಷ್ಟಿಗೋಚರವಾಗುತ್ತದೆ.

ದ್ವಾರದಿಂದ ಮಧ್ಯದಲ್ಲಿರುವ ಹೃದಯಾನ್ತರ್ವರ್ತಿಯಾದ ಶಶಿಪ್ರಭಮಂಡಲದಲ್ಲಿ ಎಂದರೆ ಚಂದ್ರನಂತೆ ತೇಜೋಮಯವಾದ ಮಂಡಲದಲ್ಲಿ ಪರಮಾತ್ಮನು ಗಾಳಿಯಿಲ್ಲದ ಪ್ರದೇಶದಲ್ಲಿರುವ ದೀಪದಂತೆ ಅಚಲನೂ ಪ್ರಕಾಶಯುಕ್ತನೂ ಆಗಿ ಇರುತ್ತಾನೆ. ಈ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳತಕ್ಕದ್ದು. ಅವನ ಸಾಕ್ಷಾತ್ಕಾರದಿಂದ ಮನುಷ್ಯನು ಅಮೃತತ್ವವನ್ನು ಹೊಂದಿ, ಪುನಃ ಸಂಸಾರಚಕ್ರದಲ್ಲಿ ಬರುವುದಿಲ್ಲ. (೧೦೮।೧೦೯)

ಇತರ ವಿಷಯಗಳನ್ನು ತಿರಸ್ಕರಿಸಿ, ಚಿತ್ತವೃತ್ತಿಯನ್ನು ಪರಮಾತ್ಮನಲ್ಲಿ ಸ್ಥಿರಮಾಡುವುದಕ್ಕೆ ಯೋಗವೆಂದು ಹೆಸರು. ಈ ಯೋಗದ ಪ್ರಾಪ್ತ್ಯರ್ಥವಾಗಿ ನಾನು ಆದಿತ್ಯಋಷಿಯಿಂದ ಬೃಹದಾರಣ್ಯಕೋಪನಿಷತ್ತನ್ನು ಸಂಪಾದಿಸಿದ್ದೇನೆ. ಇಷ್ಟೇ ಅಲ್ಲ, ನಾನು ಯೋಗಶಾಸ್ತ್ರವನ್ನೂ ಬರೆದಿದ್ದೇನೆ. ಯೋಗವನ್ನಪೇಕ್ಷಿಸುವವರು ಇವೆರಡನ್ನೂ ಓದಿ ತಿಳಿದುಕೊಳ್ಳತಕ್ಕದ್ದು. (೧೧೦)

---

* ಈ ವಿಷಯವು ಬೃಹದಾರಣ್ಯಕೋಪನಿಷತ್ತಿನ ೨ನೆಯ ಅಧ್ಯಾಯದ ೧ನೆಯ ಬ್ರಾಹ್ಮಣದ ೧೯ನೆಯ ಕಂಡಿಕೆಯಲ್ಲಿ ಇದೆ. ಅದೇನೆಂದರೆ:—"ಅಥ ಯದಾ ಸುಷುಪ್ತೋ ಭವತಿ ಯದಾ ನ ಕಸ್ಯಚನ ವೇದ ಹಿತಾ ನಾಮ ನಾಡ್ಯೋ ದ್ವಾಸಪ್ತತಿಃ ಸಹಸ್ರಾಣಿ ಹೃದಯಾತ್ಪುರೀತತಮಭಿಪ್ರತಿಷ್ಠನ್ತೇ ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ ಸ ಯಥಾ ಕುಮಾರೋ ವಾ ಮಹಾರಾಜೋ ವಾ ಮಹಾಬ್ರಾಹ್ಮಣೋ ವಾಽತಿಘ್ನೀಮಾನನ್ದಸ್ಯ ಗತ್ವಾ ಶಯೀತೈವಮೇವೈಷ ಏತಚ್ಛೇತೇ ॥

ಅರ್ಥ:—ಆ ಬಳಿಕ ಯಾವಾಗ ಅವನು ಸುಷುಪ್ತನಾಗುತ್ತಾನೆ; ಯಾವಾಗ್ಗೆ ಅವನಿಗೆ ಏನೊಂದೂ ಸ್ಮೃತಿಯಿರುವುದಿಲ್ಲ; ಆಗ 'ಹಿತಾ' ಎಂಬ ಹೆಸರಿನ ೭೨ ಸಾವಿರ ನಾಡಿಗಳು ಹೃದಯದಿಂದ ಹೊರಟು ಶರೀರವನ್ನೆಲ್ಲ ವ್ಯಾಪಿಸುತ್ತವೆ. ಅವುಗಳ ದ್ವಾರದಿಂದ ಬುದ್ಧಿಯು ಹಿಂದಿನಿಂದ ಹೋಗಿ, ಹೃದಯಾಕಾಶದಲ್ಲಿ ವಿಜ್ಞಾನಮಯ ಪರಮಾತ್ಮನು ಕುಮಾರನಂತೆ ಅಥವಾ ಮಹಾರಾಜನಂತೆ ಇಲ್ಲವೆ ಮಹಾಬ್ರಾಹ್ಮಣನಂತೆ ಆನಂದಾವಸ್ಥೆಯಲ್ಲಿ ಶಯನಮಾಡುತ್ತಾನೆ.

ಈಪ್ರಕಾರ ಯಾಜ್ಞವಲ್ಕ್ಯಮುನೀಂದ್ರರು ಯೋಗಶಾಸ್ತ್ರದಲ್ಲಿ ನಿಷ್ಣಾತರೂ ಯೋಗಸಿದ್ಧಿಯನ್ನು ಎಂದರೆ ಪರಮಾತ್ಮ ಸಾಕ್ಷಾತ್ಕಾರವನ್ನು ಹೊಂದಿದವರೂ ಆಗಿದ್ದುದರಿಂದ ಇವರಿಗೆ "ಯೋಗೀಶ್ವರ" ಎಂಬ ಪದವಿಯು ಪ್ರಾಪ್ತವಾಯಿತು.



೭ನೆಯ ಅಧ್ಯಾಯ

# ಉಪಸಂಹಾರ



೧ಆಸೀದ್ರಾಜಾ ಮಹಾಭಾಗೋ ವೀರಸೇನೋ ಮಹಾಬಲಃ।
ಅಪುತ್ರಃ ಸ ಪುರಾ ತೀವ್ರಂ ತಪಸ್ತೇಪೇ ಮಹಾಮನಾಃ ॥ ೯ ॥
ಚರತಸ್ತು ತಪೋ ಘೋರಂ ಯಾಜ್ಞವಲ್ಕ್ಯೋಮಹಾಮುನಿಃ।
ಆಜಗಾಮ ಮಹಾಯೋಗೀ ತನ್ದ್ರಷ್ಟುಂ ನಾತಿದೂರತಃ ॥೧೦॥
ತಮಾಯಾನ್ತಮಥೋ ದೃಷ್ಟ್ವಾ ಋಷಿಂ ಪರಮ ವರ್ಚಸಮ್।
ಕೃತಾಂಜಲಿಪುಟೋ ಭೂತ್ವಾ ರಾಜಾಭ್ಯುತ್ಥಾನಮಾಕರೋತ್
॥ ೧೧ ॥

(ವರಾಹಪುರಾಣ ಅಧ್ಯಾಯ ೬೪ )

ಶ್ರೀಯಾಜ್ಞವಲ್ಕ್ಯರು ಮಹಾಮುನಿಗಳೆಂದೂ ಮಹಾಯೋಗಿಗಳೆಂದೂ ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಸುಪ್ರಸಿದ್ಧರಾಗಿದ್ದಾರೆ. ಇವರ ಚರಿತ್ರೆಯನ್ನು ವಿಹಂಗಮ ದೃಷ್ಟಿಯಿಂದ ನೋಡಿದರೆ, ಈ ಯಾಜ್ಞವಲ್ಕ್ಯ ಮಹರ್ಷಿಗಳು, ಅಧ್ಯಾತ್ಮವಿಷಯದಲ್ಲಿ ಮಹಾಜ್ಞಾನಿಗಳಾಗಿಯೂ ಯಜ್ಞಯಾಗಾದಿ ಕರ್ಮಕಾಂಡದಲ್ಲಿ ನಿಷ್ಣಾತರಾಗಿಯೂ ಹಾಗೂ ಧರ್ಮಶಾಸ್ತ್ರ

೧ ಪುತ್ರಸಂತತಿಯ ಪ್ರಾಪ್ತಿಗೋಸ್ಕರ ಘೋರವಾದ ತಪಸ್ಸನ್ನಾಚರಿಸುತ್ತಿರುವ ವೀರಸೇನನೆಂಬ ರಾಜನನ್ನು ನೋಡಲು, ಮಹಾಮುನಿಗಳಾದ ಶ್ರೀಯಾಜ್ಞವಲ್ಕ್ಯ ಮಹಾಯೋಗಿಗಳು ಬಂದರು. ಮಹಾ ತೇಜಸ್ವಿಗಳಾದಂಥ ಈ ಯಾಜ್ಞವಲ್ಕ್ಯ ಮಹರ್ಷಿಗಳು ಬರುವುದನ್ನು ನೋಡಿ, ಆ ರಾಜನು ಈ ಪುಣ್ಯಶ್ಲೋಕರಿಗೆ ಸನ್ಮಾನ ಮಾಡುವುದಕ್ಕೋಸ್ಕರ ಎದ್ದುನಿಂತು ವಿನಯದಿಂದ ನಮಸ್ಕರಿಸಿ, ನಮ್ರತನದಿಂದ ಆದರ ಪುರಸ್ಸರವಾಗಿ ಸ್ವಾಗತ ಮಾಡಿದನು.

ದಲ್ಲಿ ವಿಶಾರದರಾಗಿಯೂ ಇಷ್ಟುಮಾತ್ರವೇ ಅಲ್ಲ, ಈ ಮಹಾನುಭಾವರು ಚತುರ್ವೇದಪಂಡಿತರಾಗಿಯೂ ಯೋಗಶಾಸ್ತ್ರದಲ್ಲಿ ಪಾರಂಗತರಾಗಿಯೂ ಅತಏವ ಯೋಗೀಶ್ವರರಾಗಿಯೂ ಇದ್ದಾರೆಂಬುದು ಚೆನ್ನಾಗಿ ದೃಷ್ಟಿಗೋಚರವಾಗುತ್ತದೆ. ಇನ್ನು, ಸಿಂಹಾವಲೋಕನ ನ್ಯಾಯದಿಂದ ಈ ಮಹನೀಯರು ಮಾಡಿದ ಕಾರ್ಯಗಳನ್ನು ನಿರೀಕ್ಷಿಸಿದರೆ, ಇವರು ಕೃಷ್ಣಯಜುರ್ವೇದ, ಶುಕ್ಲಯಜುರ್ವೇದಗಳ ಶಾಖಾಪ್ರವರ್ತಕ ಋಷಿಗಳಾಗಿಯೂ ಸ್ಮೃತಿಕಾರರಾಗಿಯೂ ಮತ್ತು ಯೋಗಶಾಸ್ತ್ರಗ್ರಂಥಕಾರರಾಗಿಯೂ ಇರುತ್ತಾರೆಂಬುದು ತಿಳಿದುಬರುತ್ತದೆ. ಇವರ ಈ ಲೋಕೋತ್ತರವಾದ ಪಾಂಡಿತ್ಯದಿಂದಲೂ ಕಾರ್ಯಗಳಿಂದಲೂ ಈ ಯಾಜ್ಞವಲ್ಕ್ಯ ಮಹಾಮುನಿಗಳ ಅಗಾಧ ವಿದ್ಯಾವೈಭವವೂ ಧೀರೋದಾತ್ತ ಜೀವನವೂ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿ ವ್ಯಕ್ತವಾಗುತ್ತವೆ.

ಈ ಪ್ರಕಾರ ಶ್ರೀಯಾಜ್ಞವಲ್ಕ್ಯರು ವಿಶಾಲ ಮೇಧಾವಿಗಳೂ ಘನ ಪಂಡಿತರೂ ಆಗಿದ್ದುದರಿಂದಲೇ ಇವರು ವೈಶಂಪಾಯನ ಋಷಿಗಳಿಗೂ ಆದಿತ್ಯ ಋಷಿಗಳಿಗೂ ಪರಮಪ್ರಿಯಶಿಷ್ಯರಾಗಿದ್ದರು. ಅತಏವ ಈ ಗುರುಗಳಿಬ್ಬರೂ ಒಬ್ಬರೇ ಒಬ್ಬರಾದ ತಮ್ಮ ಈ ಪ್ರಿಯಶಿಷ್ಯರಿಗೆ ಕೃಷ್ಣಯಜುರ್ವೇದ, ಶುಕ್ಲಯಜುರ್ವೇದಗಳನ್ನು ಕಲಿಸಿ, ಈ ಶಿಷ್ಯೋತ್ತಮರನ್ನು ಇವೆರಡೂ ಯಜುರ್ವೇದಗಳ ಶಾಖಾಪ್ರವರ್ತಕರನ್ನಾಗಿ ಮಾಡಿದರು. ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಿದ ಈ ಯಾಜ್ಞವಲ್ಕ್ಯ ಶ್ರೀ ಯೋಗೀಶ್ವರರು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಈ ನಾಲ್ಕೂ ಆಶ್ರಮಗಳನ್ನು ಯಥಾವತ್ತಾಗಿ ಆಚರಿಸಿದ್ದಾರೆ. ಎಂದರೆ ಋಷಿಋಣವನ್ನೂ ದೇವಋಣವನ್ನೂ ಹಾಗೂ ಪಿತೃಋಣವನ್ನೂ ತೀರಿಸಿ, ಈ ಮೂರು ಋಣಗಳಿಂದ ಮುಕ್ತರಾಗಿ, ಕೊನೆಯಲ್ಲಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಮೋಕ್ಷಸಿದ್ಧಿಯನ್ನು ಪಡೆದಿದ್ದಾರೆ, ಆದುದರಿಂದಲೇ ಈ ಪುಣ್ಯಶ್ಲೋಕರು ಸಮಸ್ತ ವೈದಿಕ ಧರ್ಮಾನುಯಾಯಿಗಳಿಗೆ ಆದರ್ಶ ಪುರುಷರಾಗಿದ್ದಾರೆ.

ಈ ಸತ್ಪುರುಷರು ಋಷಿಋಣವನ್ನು ತೀರಿಸಿದ ಕ್ರಮವು ಹೇಗೆ ಎಂದರೆ:—




ಕೃಷ್ಣಯಜುರ್ವೇದದ ತಿತ್ತಿರಿ ಋಷಿ, ಕಠ ಋಷಿ ಪ್ರಭೃತಿ ೮೬ ಜನ[೨] ಶಿಷ್ಯರಿಗೆ:—ಶ್ರೀಯಾಜ್ಞವಲ್ಕ್ಯ ಋಷಿಗಳು ಗುರುಗಳಾಗಿದ್ದಾರೆ. ಶ್ರೀವೈಶಂಪಾಯನ ಋಷಿಗಳು ಪರಮ ಗುರುಗಳಾಗಿದ್ದಾರೆ. ಶ್ರೀವೇದವ್ಯಾಸ ಋಷಿಗಳು ಪರಮೇಷ್ಠಿ ಗುರುಗಳಾಗಿದ್ದಾರೆ. ಶ್ರೀಪರಾಶರ ಋಷಿಗಳು ಪರಾತ್ಪರ ಗುರುಗಳಾಗಿದ್ದಾರೆ.

---

೨ ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳಿರುತ್ತವೆಂದು ಶ್ರೀವೇದವ್ಯಾಸರು ಬ್ರಹ್ಮಾಂಡ ಪುರಾಣದಲ್ಲಿ ೩೫ನೆಯ ಅಧ್ಯಾಯದಲ್ಲಿಯೂ, ವಾಯು ಪುರಾಣದಲ್ಲಿ ೬೧ನೆಯ ಅಧ್ಯಾಯದಲ್ಲಿಯೂ ಕಂಠೋಕ್ತವಾಗಿ ಹೇಳಿದ್ದಾರೆ. ಮತ್ತು ಪತಂಜಲಿ ಮಹರ್ಷಿಗಳು:— "ಏಕಶತಮಧ್ವರ್ಯುಶಾಖಾಃ" (ಕೃ. ಯ. ೮೬+೧೫ ಶು. ಯ.=೧೦೧ ಕೃಷ್ಣ, ಶುಕ್ಲಯಜುರ್ವೇದಗಳ ಒಟ್ಟು ಶಾಖೆಗಳು) ಎಂದು ಹೇಳಿದ್ದಾರೆ. ಇದೇ ಪ್ರಕಾರ ಚರಣವ್ಯೂಹ ಗ್ರಂಥದಲ್ಲಿಯೂ ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳೆಂದೂ ಶುಕ್ಲಯಜುರ್ವೇದದಲ್ಲಿ ೧೫ ಶಾಖೆಗಳೆಂದೂ ಉಕ್ತವಾಗಿದೆ.

## ಇದೇ ಮೇರೆಗೆ

ಶುಕ್ಲಯಜುರ್ವೇದದ ಕಣ್ವಋಷಿ, ಮಧ್ಯಂದಿನಋಷಿ ಪ್ರಭೃತಿ ೧೫ ಜನ ಶಿಷ್ಯರಿಗೆ:— ಶ್ರೀಯಾಜ್ಞವಲ್ಕ್ಯ ಋಷಿಗಳು ಗುರುಗಳಾಗಿದ್ದಾರೆ. ಶ್ರೀಆದಿತ್ಯಋಷಿಗಳು ಪರಮ ಗುರುಗಳಾಗಿದ್ದಾರೆ. ಶ್ರೀವೇದವ್ಯಾಸ ಋಷಿಗಳು ಪರಮೇಷ್ಠಿಗುರುಗಳಾಗಿದ್ದಾರೆ. ಶ್ರೀಪರಾಶರ ಋಷಿಗಳು ಪರಾತ್ಪರ ಗುರುಗಳಾಗಿದ್ದಾರೆ.

ಶ್ರೀಯಾಜ್ಞವಲ್ಕ್ಯರು, ಕೃಷ್ಣಯಜುರ್ವೇದವನ್ನು ತಿತ್ತಿರಿ, ಕಠ ಪ್ರಭೃತಿ ೮೬ ಜನ ಬ್ರಹ್ಮಚಾರಿಗಳಿಗೆ ಕಲಿಸಿ, ಅವರನ್ನು ತಮ್ಮ ಶಿಷ್ಯರನ್ನಾಗಿ ನಿರ್ಮಾಣಮಾಡಿದ ಕೂಡಲೇ ಎಂದರೆ ತಮ್ಮ ಗುರುಗಳಾದ ಶ್ರೀವೈಶಂಪಾಯನ ಋಷಿಗಳಿಗೆ ಪ್ರಶಿಷ್ಯರನ್ನು ನಿರ್ಮಾಣಮಾಡಿ ಕೊಟ್ಟ ಕೂಡಲೇ ಇವರು ಋಷಿಋಣವನ್ನು ತೀರಿಸಿದಂತಾಯಿತು. ಅರ್ಥಾತ್ ಶ್ರೀಯಾಜ್ಞವಲ್ಕ್ಯರು ಶಿಷ್ಯರೆಂಬ ಪುತ್ರರನ್ನು ಪಡೆದು (=ಹಡೆದು), ಜ್ಞಾನದಾತೃವಾದ ಗುರುವೆಂಬ ತಂದೆಯ ಋಣವನ್ನು (=ಪಿತೃಋಣವನ್ನು) ತೀರಿಸಿದಂತಾಯಿತು. (ಮನುಸ್ಮೃತಿ ೨|೧೬೧)

## ಇದೇ ರೀತಿಯಾಗಿ

ಶ್ರೀಯಾಜ್ಞವಲ್ಕ್ಯರು ಶುಕ್ಲಯಜುರ್ವೇದವನ್ನು ಕಣ್ವ, ಮಧ್ಯಂದಿನ ಪ್ರಭೃತಿ ೧೫ ಜನ ಬ್ರಹ್ಮಚಾರಿಗಳಿಗೆ ಕಲಿಸಿ, ಅವರನ್ನು ತಮ್ಮ ಶಿಷ್ಯರನ್ನಾಗಿ ನಿರ್ಮಾಣಮಾಡಿದ ಕೂಡಲೇ ಎಂದರೆ ತಮ್ಮ ಗುರುಗಳಾದ ಶ್ರೀಆದಿತ್ಯಋಷಿಗಳಿಗೆ ಪ್ರಶಿಷ್ಯರನ್ನು ನಿರ್ಮಾಣಮಾಡಿ ಕೊಟ್ಟ ಕೂಡಲೇ ಇವರು ಋಷಿಋಣವನ್ನು ತೀರಿಸಿದಂತಾಯಿತು.

ವಿದೇಹದೇಶದ ಸಮ್ರಾಟನಾದ ಜನಕಮಹಾರಾಜನು, ಶ್ರೀಯಾಜ್ಞವಲ್ಕ್ಯ ಮಹರ್ಷಿಗಳ ಪರಮ ಶಿಷ್ಯನಾಗಿದ್ದನು. ಈ ಚಕ್ರವರ್ತಿಯು:— "ನನ್ನ ಸಮಸ್ತ ರಾಜ್ಯವನ್ನೂ ನನ್ನನ್ನೂ ಸಹ ತಮ್ಮ ಚರಣಸನ್ನಿಧಿಗೆ; ಸಮರ್ಪಿಸಿದ್ದೇನೆ." ಎಂದು ವಿನಯಪುರಸ್ಸರವಾಗಿ ಶ್ರೀಯಾಜ್ಞವಲ್ಕ್ಯ

ರನ್ನು ಕುರಿತು ಪ್ರಾರ್ಥಿಸಿದ್ದನ್ನು ಹಿಂದೆಯೇ ಬೃಹದಾರಣ್ಯಕ ಉಪ ನಿಷತ್ತಿನಲ್ಲಿ ನೋಡಿದ್ದೇವೆ. (ಪುಟ ೭೫)

ಗೃಹಸ್ಥಾಶ್ರಮದಲ್ಲಿ ಶ್ರೀಯಾಜ್ಞವಲ್ಕ್ಯರಿಗೆ ಬ್ರಹ್ಮವಾದಿನಿಯಾದ ಮೈತ್ರೇಯಿದೇವಿಯೂ ಗೃಹಕಾರ್ಯದಕ್ಷಳಾದ ಎಂದರೆ ಸುಗೃಹಿಣಿ ಯಾದ ಕಾತ್ಯಾಯಿನಿ ದೇವಿಯೂ ಹೀಗೆ ಇವರಿಬ್ಬರು ಹೆಂಡಂಓರಿದ್ದರು ಎಂಬುದನ್ನು ಹಿಂದೆಯೇ ಬೃಹದಾರಣ್ಯಕ ಉಪನಿಷತ್ತಿನಲ್ಲಿ ನೋಡಿ ದ್ದೇವೆ. "ಯತೋಽಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ" ಎಂದು ಕಣಾದ ಮಹಾಮುನಿಗಳು ಹೇಳಿದಂತೆ ಶ್ರೀಯಾಜ್ಞವಲ್ಕ್ಯರು ಈ ಉಭಯ ಪತ್ನಿಯರೊಡನೆ ಧರ್ಮದಿಂದ ಆಚರಿಸಿ, ಅಭ್ಯುದಯವನ್ನೂ (ಎಂದರೆ ಐಹಿಕ ಉನ್ನತಿಯನ್ನೂ) ಹಾಗೂ ನಿಃಶ್ರೇಯಸನ್ನೂ (ಎಂದರೆ ಮೋಕ್ಷ ಸಿದ್ಧಿಯನ್ನೂ) ಸಂಪಾದಿಸಿದರು.

ಈ ಬೃಹದಾರಣ್ಯಕ ಉಪನಿಷತ್ತಿನ ವಿಷಯವಾಗಿ ಡಾ. ಮ್ಯಾಕ್ಡೊ ನೆಲ್ ಇವರು ತಾವು ಬರೆದ "**ಸಂಸ್ಕೃತ ವಾಙ್ಮಯದ ಇತಿಹಾಸ**" ದಲ್ಲಿ ಆದರ ಪುರಸ್ಸರವಾಗಿ ಹೀಗೆ ಹೇಳಿದ್ದಾರೆ:— "ಬೃಹದಾರಣ್ಯ ಕೋಪನಿಷತ್ತು ವಿಪುಲ ದೃಷ್ಟಾಂತಗಳಿಂದಲೂ ಶ್ರದ್ಧೆಯ ಉತ್ಕಟತೆ ಯಿಂದಲೂ ಮತ್ತು ಸೌಂದರ್ಯದಿಂದಲೂ ವಿಚಾರ ಪ್ರೌಢತೆಯಿಂದಲೂ ಸರ್ವ ಉಪನಿಷತ್ತುಗಳಲ್ಲಿ ಕಿಂಬಹುನಾ ಸಕಲ ವೈದಿಕ ವಾಙ್ಮಯದಲ್ಲಿ ಅನುಪಮೇಯವಾಗಿದೆ. ಅರ್ಥಾತ್ ಈ ಬೃಹದಾರಣ್ಯಕದಲ್ಲಿ ಸ್ವಾರಸ್ಯದ ಉತ್ಕರ್ಷವಾಗಿದೆ."

ಇದೇ ಮೇರೆಗೆ ಮಹಾರಾಷ್ಟ್ರದ ಸುಪ್ರಸಿದ್ಧ ಇತಿಹಾಸ ಸಂಶೋಧ ಕರಾದ ವಿದ್ವಾನ್ ಚಿಂತಾಮಣರಾವ ವೈದ್ಯ ಎಮ್. ಎ., ಎಲ್ಎಲ್. ಬಿ. ಇವರು, ತಾವು ಬರೆದ "ಸಂಸ್ಕೃತವಾಙ್ಮಯದ ಸಂಕ್ಷಿಪ್ತ ಇತಿಹಾಸ" ಎಂಬ ಗ್ರಂಥದಲ್ಲಿ (ಪುಟ ೪೫) ಹೀಗೆ ಬರೆದಿದ್ದಾರೆ—"ಶುಕ್ಲಯಜುರ್ವೇ ದದ ಬೃಹದಾರಣ್ಯಕೋಪನಿಷತ್ತು ಸರ್ವೋತ್ಕೃಷ್ಟವಾಗಿದೆ. ಸಕಲ ಉಪ ನಿಷತ್ತುಗಳಲ್ಲಿ ಛಾಂದೋಗ್ಯ ಮತ್ತು ಬೃಹದಾರಣ್ಯಕ ಇವೆರಡು

ಉತ್ತಮವಾಗಿವೆ. ಇವುಗಳಲ್ಲಿಯೂ ಬೃಹದಾರಣ್ಯಕವು ಅತ್ಯಂತ ಶ್ರೇಷ್ಠ ವಾಗಿದೆ.

ಈ ಬೃಹದಾರಣ್ಯಕೋಪನಿಷತ್ತನ್ನು ಓದುತ್ತಿರುವಾಗ್ಗೆ ಭಾರತೀಯರಿಗೆ ಆನಂದವಾಗುತ್ತದೆ; ಇಷ್ಟೇ ಅಲ್ಲ, ಡಾ. ಮ್ಯಾಕ್ಡೊನೆಲ್ ಇವರಂಥ ಆಂಗ್ಲ ಪಂಡಿತರಿಗೂ ಸಹ ಇದೇ ತರದ, ಸಂತೋಷವಾಗುತ್ತದೆ. ಈ ಮಾತನ್ನು ಅವರೇ ಒಪ್ಪಿಕೊಂಡಿದ್ದಾರೆ. ”

ಶ್ರೀಸುರೇಶ್ವರಾಚಾರ್ಯರು ಯಾಜ್ಞವಲ್ಕ್ಯಸ್ಮೃತಿಗೆ ಬಾಲಕ್ರೀಡಾ ನಾಮಕ ಟೀಕೆಯನ್ನು ಬರೆಯುವಾಗ್ಗೆ ಈ ಟೀಕೆಯ ಕೊನೆಯಲ್ಲಿ ಶ್ರೀಯಾಜ್ಞವಲ್ಕ್ಯರನ್ನು ಅತ್ಯುತ್ಕಟಭಕ್ತಿಯಿಂದ ಹೀಗೆ ಸ್ತುತಿಸಿದ್ದಾರೆ:—

ಲಬ್ಧ್ವಾ ರಹಸ್ಯಾನಿ ಸುದುರ್ಲಭಾನಿ
ಯಜೂಂಷಿ ಶುಕ್ಲಾನಿ ವಿವಸ್ವತೋ ಯಃ ||
ಸ್ವರ್ಗಾಪವರ್ಗಾವಕರೋತ್ ಪ್ರಕಾಶೌ
ಜಯತ್ಯಸೌ ಬ್ರಹ್ಮವಿವೇಕ ಹಂಸಃ ||

ಅರ್ಥ:—ರಹಸ್ಯಪೂರ್ಣವಾದ ಮತ್ತು ಸುದುರ್ಲಭವಾದ ಎಂದರೆ ಅತ್ಯಂತ ಶ್ರೇಷ್ಠವಾದ ಶುಕ್ಲಯಜುರ್ವೇದವನ್ನು ಯಾರು ಸೂರ್ಯನಿಂದ ಎಂದರೆ ಸೂರ್ಯ ಋಷಿಯಿಂದ ಸಂಪಾದಿಸಿ, ಸ್ವರ್ಗ, ಮೋಕ್ಷಗಳನ್ನು ಪ್ರಕಾಶಮಯವಾಗಿ ಮಾಡಿದರೋ, ಆ ಬ್ರಹ್ಮಜ್ಞಾನಿಗಳಾದ ಶ್ರೇಷ್ಠಯತಿಗಳು (ಎಂದರೆ ಶ್ರೀಯಾಜ್ಞವಲ್ಕ್ಯರು) ಜಯಶಾಲಿಗಳಾಗಿರುವರು.

ಶ್ರೀಮನ್ಮಧ್ವಾಚಾರ್ಯರು ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಶಾಕಲ್ಯಬ್ರಾಹ್ಮಣದ ಕೊನೆಯಲ್ಲಿ ಯಾಜ್ಞವಲ್ಕ್ಯರು ಮಹಾಮುನಿಗಳೆಂದು ಕಂಠೋಕ್ತವಾಗಿ ಹೀಗೆ ಹೇಳಿದ್ದಾರೆ:—

**ಸ್ವಯಮೇವ ತದೋವಾಚ ಯಾಜ್ಞವಲ್ಕ್ಯೋ ಮಹಾಮುನಿಃ |**

**ಅರ್ಥ:-ಯಾಜ್ಞವಲ್ಕ್ಯ ಮಹಾಮುನಿಗಳು ಆ ಬಳಿಕ ಸ್ವತಃ ತಾವೇ ಮಾತನಾಡಿದರು.**

ಶ್ರೀವಿದ್ಯಾರಣ್ಯರು ತಾವು ಬರೆದ "ಪಂಚದಶೀ' ಎಂಬ ಗ್ರಂಥದಲ್ಲಿ ಶ್ರೀಯಾಜ್ಞವಲ್ಕ್ಯರ ಅಭಿಪ್ರಾಯಗಳನ್ನು ಆದರ ಪುರಸ್ಸರವಾಗಿ ಸ್ವೀಕರಿಸಿ, ಅವರನ್ನು ಗೌರವಿಸಿದ್ದಾರೆ. ಹೇಗೆಂದರೆ:—

ಆತ್ಮಾ ಕತಮ ಇತ್ಯುಕ್ತೇ ಯಾಜ್ಞವಲ್ಕ್ಯೋ ವಿಬೋಧಯನ್।
ವಿಜ್ಞಾನಮಯಮಾರಭ್ಯಾಸಂಗಂ ತಂ ಪರ್ಯಶೇಷಯತ್॥
(ಪಂಚದಶೀ ೭।೧೯೮)

ಅರ್ಥ: - 'ಆತ್ಮಾ ಯಾವುದು ?" ಎಂದು ಜನಕರಾಜನು ಶ್ರೀಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನೆಮಾಡಿದನು. (ಬೃಹದಾರಣ್ಯಕ ಅ. ೪, ಬ್ರಾ. ೩, ಕಂ. ೭) ಆಗ ಯಾಜ್ಞವಲ್ಕ್ಯರು ಅವನಿಗೆ ಜ್ಞಾನೋಪದೇಶ ಮಾಡುತ್ತಿರುವಾಗ್ಗೆ, ವಿಜ್ಞಾನಮಯನಿಂದ ಆರಂಭಮಾಡಿ, (ಎಲ್ಲವುಗಳ ನಿರಸನ ಮಾಡಿದ ಬಳಿಕ) ಅವರು ಆ ಅಸಂಗ ಆತ್ಮನನ್ನು ಅವಶಿಷ್ಟವಾಗಿ ಇಟ್ಟರು.

ಬೋಧಯಾಮಾಸ ಮೈತ್ರೇಯೀ ಯಾಜ್ಞವಲ್ಕ್ಯೋ ನಿಜ ಪ್ರಿಯಾಮ್ ।
ನ ವಾ ಅರೇ ಪತ್ಯುರರ್ಥೇ ಪತಿಃ ಪ್ರಿಯ ಇತೀರಯನ್ ॥
(ಪಂಚದಶೀ ೧೨.೫)

ಅರ್ಥ:—ಪತಿಯ ಪ್ರಯೋಜನಕ್ಕೋಸ್ಕರ ಪತ್ನಿಗೆ ಪತಿಯು ಪ್ರಿಯನಾಗುವುದಿಲ್ಲ; ಆದರೆ ಸ್ವತಃ ತನ್ನ ಪ್ರಯೋಜನಕ್ಕೋಸ್ಕರ ಆಕೆಗೆ ಪತಿಯು ಪ್ರಿಯನಾಗುತ್ತಾನೆ. (ಬೃಹದಾರಣ್ಯಕ ಅ. ೪, ಬ್ರಾ. ೫, ಕಂ.೬) ಎಂದುಹೇಳಿ, ಯಾಜ್ಞವಲ್ಕ್ಯರು ತಮ್ಮ ಪ್ರಿಯ ಪತ್ನಿಯಾದ ಮೈತ್ರೇಯಿಗೆ ಉಪದೇಶಮಾಡಿದರು.

ಆತ್ಮಾ ಪ್ರೇಯಾನ್ ಪ್ರಿಯಃ ಶೇಷೋ ದ್ವೇಷೋಪೇಕ್ಷ್ಯೇ ತದನ್ಯಯೋಃ ।
ಇತಿ ವ್ಯವಸ್ಥಿತೋ ಲೋಕೋ ಯಾಜ್ಞವಲ್ಕ್ಯಮತಂ ಚ ತತ್ ॥
(ಪಂಚದಶೀ ೧೨।೫೫)

ಅರ್ಥ:—ಪ್ರತಿಯೊಬ್ಬನಿಗೆ ಆನಂದರೂಪನಾದ ಆತ್ಮನು ಅತಿಶಯ ಪ್ರಿಯನಾಗಿದ್ದಾನೆ. ಸುಖಕ್ಕೆ ಸಾಧನವಾದ ಪದಾರ್ಥಗಳು ಕೆಲಮಟ್ಟಿಗೆ ಪ್ರಿಯವಾಗಿರುತ್ತವೆ; ವ್ಯಾಘ್ರವೊದಲಾದ ಪ್ರಾಣಿಗಳು (ವಸ್ತುಗಳು) ದ್ವೇಷಕ್ಕೆ ಪಾತ್ರವಾಗಿರುತ್ತವೆ; ನಿರುಪಯೋಗವಾದ ತೃಣಾದಿ ಪದಾರ್ಥಗಳು ಉಪೇಕ್ಷೆಯನ್ನು ಮಾಡುವುದಕ್ಕೆ ಯೋಗ್ಯವಾಗಿರುತ್ತವೆ. ಈ ಪ್ರಕಾರ ಈ ಲೋಕವು ವ್ಯವಸ್ಥಿತವಾಗಿದೆ. ಈ ತತ್ತ್ವಾರ್ಥವು ಯಾಜ್ಞವಲ್ಕ್ಯರಿಗೂ ಮಾನ್ಯವಿದೆ.

ಈಪ್ರಕಾರ ಶ್ರೀವಿದ್ಯಾರಣ್ಯರು ಶ್ರೀಯಾಜ್ಞವಲ್ಕ್ಯರ ಮತವನ್ನು ಗೌರವಪುರಸ್ಸರವಾಗಿ ಉಲ್ಲೇಖಿಸಿ, ಅವರ ಮಹಿಮೆಯನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ಶ್ರೀವೇದವ್ಯಾಸರು ವರಾಹಪುರಾಣದಲ್ಲಿ ಯಾಜ್ಞವಲ್ಕ್ಯರು ಮಹಾಮಹಾಮುನಿಗಳೆಂದು ಘಂಟಾಘೋಷವಾಗಿ ಹೇಳಿರುವುದನ್ನು ಈ ಅಧ್ಯಾಯದ ಶಿರೋಭಾಗದಲ್ಲಿಯೇ ತೋರಿಸಿದ್ದೇವೆ.

ಈ ಪುಣ್ಯಶ್ಲೋಕರ ದಿವ್ಯಚರಿತ್ರೆಯನ್ನು ಬರೆದು ನನ್ನ ವಾಣಿಯು ಪವಿತ್ರವಾಯಿತು; ನಾನು ಧನ್ಯನಾದೆನು.

ಇತಿ

। ಶ್ರೀಕೃಷ್ಣಾರ್ಪಣಮಸ್ತು ।



೧ನೆಯ ಪರಿಶಿಷ್ಟ

# ವೇದಗಳು ಮತ್ತು ಅವುಗಳ ಶಾಖೆಗಳು



## ಋಗ್ವೇದ

ಋಗ್ವೇದದಲ್ಲಿ (೧) ಶಾಕಲ (೨) ಬಾಷ್ಕಲ (೩) ಆಶ್ವಲಾಯನ (೪) ಶಾಂಖಾಯನ (೫) ಮಾಂಡೂಕೇಯ ಎಂಬ ೫ ಶಾಖೆಗಳಿವೆ. ಇವುಗಳಲ್ಲಿ ಶಾಕಲ ಶಾಖೆಯ ಬ್ರಾಹ್ಮಣರು ಮಾತ್ರ ಈಗ ಇದ್ದಾರೆ. ಈ ಪ್ರಕಾರ ಋಕ್+ವೇದದ ಇದೊಂದೇ ಶಾಖೆಯ ಬ್ರಾಹ್ಮಣರು ಈಗ ಇರುವುದರಿಂದ ಈ ಶಾಕಲ ಶಾಖೆಯ ಬ್ರಾಹ್ಮಣರನ್ನು "ಋಕ್‌ಶಾಖೆಯ ಬ್ರಾಹ್ಮಣರು" ಎಂದು ಸಂಭೋಧಿಸುತ್ತಾರೆ. ಈ ಶಾಕಲಶಾಖೆಯ ಬ್ರಾಹ್ಮಣರು ಆಶ್ವಲಾಯನ ಸೂತ್ರಾನುಯಾಯಿಗಳಾದುದರಿಂದ ಇವರನ್ನು "ಆಶ್ವಲಾಯನರು" ಎಂದೂ ಕರೆಯುತ್ತಾರೆ. ಈ ಶಾಕಲ ಶಾಖೆಯ ಬ್ರಾಹ್ಮಣರಲ್ಲಿ ಅದ್ವೈತಮತಾನುಯಾಯಿಗಳೂ ಇದ್ದಾರೆ; ದ್ವೈತ ಮತಾನುಯಾಯಿಗಳೂ ಇದ್ದಾರೆ; ಮತ್ತು ವಿಶಿಷ್ಟಾದ್ವೈತ ಮತಾನುಯಾಯಿಗಳೂ ಇದ್ದಾರೆ. (ತೆಂಗಲೆ ರಾಮಾನುಜೀಯರೆಲ್ಲರೂ ಶಾಕಲಶಾಖೆಯ ಬ್ರಾಹ್ಮಣರೇ ಆಗಿದ್ದಾರೆ.) ಈ ಶಾಕಲಶಾಖೆಯ ಬ್ರಾಹ್ಮಣರು, ಗುರ್ಜರ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರ, ದ್ರಾವಿಡ ಈ ಪಂಚದ್ರಾವಿಡ ಬ್ರಾಹ್ಮಣರಲ್ಲಿ ಇದ್ದಾರೆ. ಮತ್ತು ಉತ್ತರಹಿಂದುಸ್ಥಾನದಲ್ಲಿ ಉತ್ಕಲ, ಮೈಥಿಲ, ಕಾನ್ಯಕುಬ್ಜ, ಸಾರಸ್ವತ, ಗೌಡ ಈ ಪಂಚಗೌಡಬ್ರಾಹ್ಮಣರಲ್ಲಿ ಸಾರಸ್ವತಬ್ರಾಹ್ಮಣರು ಶಾಕಲಶಾಖೆಯ ಬ್ರಾಹ್ಮಣರಾಗಿದ್ದಾರೆ. ಗುರ್ಜರದೇಶದಲ್ಲಿ ಕೆಲವರು

ಬ್ರಾಹ್ಮಣರು ಶಾಂಖಾಯನ ಸಂಹಿತೆಯನ್ನು ಪಠಿಸುತ್ತಾರೆ. ಇವರು ಶಾಂಖಾಯನ ಸೂತ್ರಾನುಯಾಯಿಗಳಾಗಿದ್ದಾರೆ.

## ಶುಕ್ಲ ಯಜುರ್ವೇದ

ಶುಕ್ಲಯಜುರ್ವೇದದಲ್ಲಿ (೧) ಕಾಣ್ವ (೨) ಮಾಧ್ಯಂದಿನ (೩) ಜಾಬಾಲಾ (೪, ಸ್ಥಾಪಾಯನೀಯ (೫) ವತ್ಸಾ (೬) ಪೌಂಡ್ರವತ್ಸಾ (೭) ಆವಟಿಕಾ (೮) ಪರಮಾವಟಿಕಾ (೯) ಪಾರಾಶರ್ಯಾ (೧೦) ವೈಧೇಯಾ (೧೧) ವೈನೇಯಾ (೧೨) ಔಧೇಯಾ (೧೩) ಗಾಲವಾ (೧೪) ವೈಜವಾ (೧೫) ಕಾತ್ಯಾಯನ ಎಂಬ ೧೫ ಶಾಖೆಗಳಿವೆ. ಇವರಲ್ಲಿ ಕಾಣ್ವಶಾಖೆಯ ಬ್ರಾಹ್ಮಣರು ಇದ್ದಾರೆ. ಮಾಧ್ಯಂದಿನಶಾಖೆಯ ಬ್ರಾಹ್ಮಣರು ಇದ್ದಾರೆ. ಈ ೧೫ ಶಾಖೆಗಳಲ್ಲಿ ಇವೆರಡೇ ಶಾಖೆಗಳು ಈಗ ಉಪಲಬ್ಧವಾಗಿವೆ. ಇವೆರಡೂ ಶಾಖೆಗಳ ಬ್ರಾಹ್ಮಣರು ಕಾತ್ಯಾಯನ ಸೂತ್ರಾನುಯಾಯಿಗಳಾಗಿದ್ದಾರೆ. ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅದ್ವೈತಮತಾನುಯಾಯಿಗಳೂ ಇದ್ದಾರೆ. ದ್ವೈತಮತಾನುಯಾಯಿಗಳೂ ಇದ್ದಾರೆ; ಹಾಗೂ ವಿಶಿಷ್ಟಾದ್ವೈತಮತಾನುಯಾಯಿಗಳೂ ಇದ್ದಾರೆ. ಮಾಧ್ಯಂದಿನಶಾಖೆಯ ಬ್ರಾಹ್ಮಣರೆಲ್ಲರೂ ಅದ್ವೈತಮತಾನುಯಾಯಿಗಳಾಗಿದ್ದಾರೆ. ಕಾಣ್ವಶಾಖೆಯ ಬ್ರಾಹ್ಮಣರು ಗುರ್ಜರ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರ, ದ್ರಾವಿಡ ಈ ಪಂಚದ್ರಾವಿಡ ದೇಶಗಳಲ್ಲಿದ್ದಾರೆ. ಮಾಧ್ಯಂದಿನಶಾಖೆಯ ಬ್ರಾಹ್ಮಣರು ಗುರ್ಜರ, ಮಹಾರಾಷ್ಟ್ರ, ಕರ್ನಾಟಕ, ದೇಶಗಳಲ್ಲಿಯೂ ಉತ್ತರಹಿಂದುಸ್ಥಾನದಲ್ಲಿಯೂ ಇದ್ದಾರೆ.

## ಕೃಷ್ಣ ಯಜುರ್ವೇದ

ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳಿರುತ್ತವೆಂದು ಚರಣವ್ಯೂಹಗ್ರಂಥದಲ್ಲಿ, ಬ್ರಹ್ಮಾಂಡಪುರಾಣದಲ್ಲಿ, ಮತ್ತು ವಾಯುಪುರಾಣದಲ್ಲಿ ಉಕ್ತವಾಗಿರುತ್ತದೆಂಬುದನ್ನು ಹಿಂದೆಯೇ ನೋಡಿದ್ದೇವೆ. ಈ ೮೬ ಶಾಖೆಗಳಲ್ಲಿ (೧) ತೈತ್ತಿರೀಯ (೨) ಕಠ (೩) ಮೈತ್ರಾಯಣೀಯ ಎಂಬ ಮೂರೇ ಶಾಖೆಗಳು ಮಾತ್ರ ಈಗ ಉಪಲಬ್ಧವಾಗಿವೆ. ಮೈತ್ರಾಯ

ಣೀಯಶಾಖೆಯ ಪ್ರಾಚೀನ ಹೆಸರು 'ಕಾಲಾಪಶಾಖೆ' ಎಂದು ಇದೆ. ತೈತ್ತಿರೀಯಶಾಖೆಯ ಆಪಸ್ತಂಬ ಸೂತ್ರಾನುಯಾಯಿಗಳಾದ ಬ್ರಾಹ್ಮಣರು ಗುರ್ಜರ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರ, ದ್ರಾವಿಡ ದೇಶಗಳಲ್ಲಿ ಇದ್ದಾರೆ. ಈ ಆಪಸ್ತಂಬ ಬ್ರಾಹ್ಮಣರಲ್ಲಿ ಅದ್ವೈತಮತಾನುಯಾಯಿಗಳಿದ್ದಾರೆ; ದ್ವೈತಮತಾನುಯಾಯಿಗಳಿದ್ದಾರೆ; ಮತ್ತು ವಿಶಿಷ್ಟಾದ್ವೈತಮತಾನುಯಾಯಿಗಳಿದ್ದಾರೆ. (ವಡಗಲೆ ರಾಮಾನುಜೀಯರೆಲ್ಲರೂ ಆಪಸ್ತಂಬರೇ ಆಗಿದ್ದಾರೆ.) ತೈತ್ತಿರೀಯಶಾಖೆಯ ಬೋಧಾಯನಸೂತ್ರಾನುಯಾಯಿಗಳು ಅದ್ವೈತಮತಾನುಯಾಯಿಗಳೂ ಇದ್ದಾರೆ. ದ್ವೈತಮತಾನುಯಾಯಿಗಳೂ ಇದ್ದಾರೆ. ಈ ಬೋಧಾಯನರು ಉತ್ತರ ಹಿಂದುಸ್ಥಾನದಲ್ಲಿಯೂ ಕರ್ಣಾಟಕ, ತುಳುನಾಡುಗಳಲ್ಲಿಯೂ ಇದ್ದಾರೆ. ತೈತ್ತಿರೀಯಶಾಖೆಯ ಹಿರಣ್ಯಕೇಶಿ, ಅಥವಾ ಸತ್ಯಾಷಾಢ ಸೂತ್ರಾನುಯಾಯಿಗಳು ಎಲ್ಲರೂ ಅದ್ವೈತಮತಾನುಯಾಯಿಗಳಾಗಿದ್ದಾರೆ. ಇವರು ಮಹಾರಾಷ್ಟ್ರದೇಶದಲ್ಲಿ (ಕೊಂಕಣದಲ್ಲಿ) ಕರ್ನಾಟಕದೇಶದಲ್ಲಿ ಇದ್ದಾರೆ. ಈ ತೈತ್ತಿರೀಯಶಾಖೆಗೆ ಭಾರದ್ವಾಜಸೂತ್ರ, ವೈಖಾನಸಸೂತ್ರ ವಾಧೂಲ ಸೂತ್ರ ಎಂದು ಇನ್ನೂ ಮೂರು ಸೂತ್ರಗಳುಂಟು. ಈ ಮೂರು ಸೂತ್ರಗಳ ಅನುಯಾಯಿಗಳು ಹಿಂದುಸ್ಥಾನ ದೇಶದ ಯಾವಯಾವ ಭಾಗದಲ್ಲಿದ್ದಾರೆಂಬುದು ಇನ್ನೂ ಅಷ್ಟು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಇನ್ನು ಕೃಷ್ಣ ಯಜುರ್ವೇದದ ಕಠ ಶಾಖೆಯ ಬ್ರಾಹ್ಮಣರು ಈಗ ಕಾಶ್ಮೀರದೇಶದಲ್ಲಿ ಮಾತ್ರ ಇದ್ದಾರೆ. ಇವರು ಕಾಠಕ ಸೂತ್ರಾನುಯಾಯಿಗಳಾಗಿದ್ದಾರೆ. ಕೃಷ್ಣಯಜುರ್ವೇದದ ಮೈತ್ರಾಯಣೀಯಶಾಖೆಯ ಬ್ರಾಹ್ಮಣರು ಈಗ ನರ್ಮದಾನದಿಯ ಉತ್ತರಕ್ಕೆ ಗುಜರಾಥದೇಶದಲ್ಲಿ ವಿಶೇಷತಃ ಅಮದಾಬಾದ ಹಾಗೂ ಮೋರವಿ ನಗರಗಳಲ್ಲಿ ಇದ್ದಾರೆ. ಇವರು ಅದ್ವೈತಮತಾನುಯಾಯಿಗಳಾಗಿದ್ದಾರೆ. ಸಾರಾಂಶ ಕೃಷ್ಣಯಜುರ್ವೇದದ ೩ ಶಾಖೆಗಳಿಗೆ ೮ ಗೃಹ್ಯಸೂತ್ರಗಳಿವೆ. ಹೇಗೆಂದರೆ:— (೧) **ತೈತ್ತಿರೀಯಶಾಖೆಗೆ:—** (I) ಆಪಸ್ತಂಬ (II) ಬೋಧಾಯನ (III) ಹಿರಣ್ಯಕೇಶಿ ಅಥವಾ ಸತ್ಯಾಷಾಢ (IV) ಭಾರದ್ವಾಜ (V) ವೈಖಾನಸ (VI) ವಾಧೂಲ

ಈ ಪ್ರಕಾರ ೬ ಗೃಹ್ಯಸೂತ್ರಗಳು. (೨) **ಕಠಶಾಖೆಗೆ:**—ಕಾಠಕ ಗೃಹ್ಯ ಸೂತ್ರವು. ( ೩ ) **ಮೈತ್ರಾಯಣೀಯಶಾಖೆಗೆ:**— ಮಾನವ ಗೃಹ್ಯ ಸೂತ್ರವು.

## ಸಾಮವೇದ

ಸಾಮವೇದದಲ್ಲಿ ಒಂದು ಸಾವಿರ (೧೦೦೦) ಶಾಖೆಗಳು ಇರುತ್ತವೆಂದು ಚರಣವ್ಯೂಹ ಗ್ರಂಥದಲ್ಲಿ ಉಕ್ತವಾಗಿದೆ. ಇವುಗಳಲ್ಲಿ (೧) ರಾಣಾಯನೀಯ (೨) ಕೌಥುಮ ಇವೆರಡೇ ಶಾಖೆಗಳು ಮಾತ್ರ ಉಪ ಲಬ್ಧವಾಗಿವೆ. ರಾಣಾಯನೀಯ ಶಾಖೆಯ ಬ್ರಾಹ್ಮಣರು— ಗುರ್ಜರ, ಮಹಾರಾಷ್ಟ್ರ, ಕರ್ಣಾಟಕ, ಆಂಧ್ರ, ದ್ರಾವಿಡ ಈ ಪಂಚದ್ರಾವಿಡ ದೇಶ ಗಳಲ್ಲಿ ಇದ್ದಾರೆ. ಈ ರಾಣಾಯನೀಯ ಶಾಖೆಯ ಬ್ರಾಹ್ಮಣರು ಅದ್ವೈತ ಮತದಲ್ಲಿಯೂ ಇದ್ದಾರೆ; ದ್ವೈತಮತದಲ್ಲಿಯೂ ಇದ್ದಾರೆ. ಇನ್ನು, ಕೌತುಮಶಾಖೆಯ ಬ್ರಾಹ್ಮಣರು ಕಾನ್ಯಕುಬ್ಜ ಪ್ರಭೃತಿ ಪಂಚಗೌಡ ಬ್ರಾಹ್ಮಣರಲ್ಲಿ ಇದ್ದಾರೆ. ಈ ಕೌತುಮಶಾಖೆಯ ಬ್ರಾಹ್ಮಣರು ಅದ್ವೈತ ಮತಾನುಯಾಯಿಗಳಾಗಿದ್ದಾರೆ.

## ಅಥರ್ವವೇದ

ಅಥರ್ವವೇದದಲ್ಲಿ—(೧) ಪೈಪ್ಪಲಾ (ಎಂದರೆ ಪಿಪ್ಪಲಾದ ಶಾಖಾ) (೨) ದಾನ್ತಾ (೩) ಪ್ರದಾನ್ತಾ (೪) ಸ್ನಾತಾ (೫) ಔಂತಾ (೬) ಬ್ರಹ್ಮ ಪಲಾಶ (೭) ಶೌನಕೀಯ (೮) ವೇದದರ್ಶಿ (೯) ಚಾರಣವಿದ್ಯಾ ಈ ಪ್ರಕಾರ ಒಂಬತ್ತು ಶಾಖೆಗಳು ಇರುತ್ತವೆ. ಇವುಗಳಲ್ಲಿ (೧) ಪಿಪ್ಪಲಾದ ಶಾಖೆ (೨) ಶೌನಕೀಯ ಶಾಖೆ ಇವೆರಡೇ ಶಾಖೆಗಳು ಮಾತ್ರ ಈಗ ಉಪ ಲಬ್ಧವಾಗಿವೆ. ಇವೆರಡೂ ಶಾಖೆಗಳ ಬ್ರಾಹ್ಮಣರು ಉತ್ತರ ಹಿಂದುಸ್ಥಾನ ದಲ್ಲಿ ಇದ್ದಾರೆ. ಇವರು ಅದ್ವೈತಮತಾನುಯಾಯಿಗಳಾಗಿದ್ದಾರೆ.

ಸಾರಾಂಶ:— ಈಗ ಉಪಲಬ್ಧವಾಗಿರುವ (೧) ಶಾಕಲ (೨) ಕಾಣ್ವ (೩) ಮಾಧ್ಯಂದಿನ (೪) ತೈತ್ತಿರೀಯ (೫) ಕಠ (೬) ಮೈತ್ರಾಯಣೀಯ (೭) ರಾಣಾಯನೀಯ (೮) ಕೌಥುಮ (೯) ಪಿಪ್ಪಲಾದ (೧೦) ಶೌನಕೀಯ

ಈ ಹತ್ತು ಶಾಖೆಗಳ ಬ್ರಾಹ್ಮಣರಲ್ಲಿ— (೧) **ಶಾಕಲ** (೨) **ಕಾಣ್ವ** (೩) **ತೈತ್ತಿರೀಯ** (ಆಪಸ್ತಂಬ ಸೂತ್ರಾನುಯಾಯಿಗಳು ಮಾತ್ರ) **ಈ ಮೂರೇ ಶಾಖೆಗಳ ಬ್ರಾಹ್ಮಣರು, ಅದ್ವೈತ ಮತದಲ್ಲಿ ಕೆಲವರು; ದ್ವೈತಮತದಲ್ಲಿ ಕೆಲವರು; ಹಾಗೂ ವಿಶಿಷ್ಟಾದ್ವೈತ ಮತದಲ್ಲಿ ಕೆಲವರು ಈ ಪ್ರಕಾರ ಈ ೩ ಶಾಖೆಗಳ ಬ್ರಾಹ್ಮಣರು ತ್ರಿಮತಸ್ಥರಲ್ಲಿಯೂ ಇದ್ದಾರೆ.** ಮಿಕ್ಕ ೭ ಶಾಖೆಗಳ ಬ್ರಾಹ್ಮಣರಲ್ಲಿ ಹೀಗೆ ತ್ರಿಮತಸ್ಥರೂ ಇಲ್ಲ; ರಾಣಾಯನೀಯ ಶಾಖೆಯವರು, ತೈತ್ತಿರೀಯ ಶಾಖೆಯವರು (ಬೋಧಾಯನ ಸೂತ್ರಾನುಯಾಯಿಗಳು ಮಾತ್ರ) ಈ ರೀತಿ ಈ ಉಭಯ ಶಾಖೆಗಳ ಬ್ರಾಹ್ಮಣರು ಅದ್ವೈತ ಮತದಲ್ಲಿ ಕೆಲವರು; ದ್ವೈತಮತದಲ್ಲಿ ಕೆಲವರು ಇದ್ದಾರೆ. ಎಂದರೆ ರಾಣಾಯನೀಯ ಶಾಖೆಯ ಬ್ರಾಹ್ಮಣರಲ್ಲಿಯೂ ಈ ಪ್ರಕಾರ ದ್ವಿಮತಸ್ಥರು ಇದ್ದಾರೆ; ಹಾಗೆಯೇ ಬೋಧಾಯನರಲ್ಲಿಯೂ ಕೆಲವರು ದ್ವೈತರು; ಕೆಲವರು ಅದ್ವೈತರು. ಈ ರೀತಿ ದ್ವಿಮತಸ್ಥರಿದ್ದಾರೆ. ಆದರೆ ಮಾಧ್ಯಂದಿನ, ಕಠ, ಮೈತ್ರಾಯಣೀಯ, ಕೌಥುಮ, ಪಿಪ್ಪಲಾದ, ಶೌನಕೀಯ, ತೈತ್ತಿರೀಯ (ಹಿರಣ್ಯಕೇಶಿ, ಭಾರದ್ವಾಜ, ವಾಧೂಲ ಸೂತ್ರಾನುಯಾಯಿಗಳು ಮಾತ್ರ) ಈ ಎಲ್ಲ ಶಾಖೆಗಳ ಬ್ರಾಹ್ಮಣರು ಕೇವಲ ಅದ್ವೈತ ಮತಸ್ಥರಾಗಿದ್ದಾರೆ. ತೈತ್ತಿರೀಯ ಶಾಖೆಯ ವೈಖಾನಸ ಸೂತ್ರಾನುಯಾಯಿಗಳು ಕೇವಲ ವಿಶಿಷ್ಟಾದ್ವೈತಮತಸ್ಥರಾಗಿದ್ದಾರೆ. ಈ ಎಲ್ಲ ಶಾಖೆಗಳ ಶ್ರೌತಸೂತ್ರಗಳನ್ನೂ ಗೃಹ್ಯಸೂತ್ರಗಳನ್ನೂ ಮುಂದೆ ೩ನೆಯ ಪರಿಶಿಷ್ಟದಲ್ಲಿ ವಿಸ್ತಾರವಾಗಿ ವಿವೇಚಿಸುವವರಿದ್ದೇವೆ.



೨ನೆಯ ಪರಿಶಿಷ್ಟ

# ಸಂಹಿತೆಗಳು, ಬ್ರಾಹ್ಮಣಗಳು ಮತ್ತು ಉಪನಿಷತ್ತುಗಳು



ಸಂಹಿತೆಯ ಪ್ರವಚನಕ್ಕೆ ಬ್ರಾಹ್ಮಣವೆಂದು ಹೆಸರು; ಎಂದರೆ ಸಂಹಿತೆಯಲ್ಲಿಯ ಪ್ರತಿಯೊಂದು ಮಂತ್ರದ ವಿನಿಯೋಗವು, ಅರ್ಥಾತ್ ಯಜ್ಞಯಾಗಾದಿ ವೈದಿಕ ಕರ್ಮಕಲಾಪದಲ್ಲಿ ಯಾವ ವೇಳೆಯಲ್ಲಿ,ಯಾವ ಸಂದರ್ಭದಲ್ಲಿ, ಸಂಹಿತೆಯಲ್ಲಿಯ ಮಂತ್ರಗಳನ್ನು ಹೇಗೆ ವಿನಿಯೋಗಿಸ ಬೇಕೆಂಬುದರ ವಿವೇಚನೆಗೆ ಬ್ರಾಹ್ಮಣವೆಂದು ಹೆಸರು. ಸಂಹಿತೆಯಲ್ಲಿಯ ಮಂತ್ರಗಳ ಹಾಗೂ ಕರ್ಮವಿಧಿಗಳ ಪರಸ್ಪರ ಸಂಬಂಧವನ್ನೂ ಅವು ಗಳ ಸಾಂಕೇತಿಕ ಅರ್ಥಗಳನ್ನೂ ಸ್ಪಷ್ಟೀಕರಣ ಮಾಡುವುದೇ ಬ್ರಾಹ್ಮಣ ಗ್ರಂಥಗಳ ಉದ್ದೇಶವಾಗಿದೆ.

ಸಂಹಿತೆಗಳು ಪದ್ಯಮಯವಾಗಿದ್ದು, ಬ್ರಾಹ್ಮಣಗಳು ಗದ್ಯಮಯ ವಾಗಿವೆ. ಬ್ರಾಹ್ಮಣಗಳು ಸಂಹಿತೆಗಳೊಡನೆ ಪರಂಪರಾಗತವಾಗಿ ಮುಖೋದ್ಗತರೂಪದಿಂದ ಸಾಗಿಬಂದು, ಕಿಸ್ತಪೂರ್ವ ೩೦೦೦ ವರ್ಷ ಗಳ ಹಿಂದೆ ಯಾಜ್ಞವಲ್ಕ್ಯರ ಕಾಲದಲ್ಲಿ ಗ್ರಂಥಸ್ಥವಾದವು. ಪ್ರತಿ ಯೊಂದು ಬ್ರಾಹ್ಮಣಗ್ರಂಥದಲ್ಲಿ (೧) ಯಜ್ಞಯಾಗಾದಿ ಕರ್ಮವಿಧಿಗಳ ವರ್ಣನೆ (೨) ಅರ್ಥವಾದಗಳು (೩) ಆರಣ್ಯಕಗಳು ಮತ್ತು ಉಪನಿಷತ್ತು ಗಳು ಈ ಪ್ರಕಾರ ಮೂರು ವರ್ಗಗಳಿವೆ. ಅವು ಹೇಗೆಂದರೆ:—

(೧) ಬ್ರಾಹ್ಮಣಗ್ರಂಥದಲ್ಲಿ ಯಜ್ಞಯಾಗಾದಿ ಶ್ರೌತಕರ್ಮಗಳ ಪವಿತ್ರ ರಹಸ್ಯವನ್ನು ತಿಳಿಸುವುದಿಷ್ಟೇ ಮುಖ್ಯ ಉದ್ದೇಶವಾಗಿದ್ದುದರಿಂದ ಶ್ರೌತಕರ್ಮಗಳ ವಿವರಣವು ಸ್ಥೂಲಮಾನದಿಂದ ಇದೆ. ಸವಿಸ್ತರವಾಗಿಲ್ಲ; ಎಂದರೆ ಸಾದ್ಯಂತವಾಗಿಯೂ ಸಾಂಗವಾಗಿಯೂ ಇರುವುದಿಲ್ಲ. (೨) ಬ್ರಾಹ್ಮಣಗ್ರಂಥದಲ್ಲಿ ಅರ್ಥವಾದಗಳಿವೆ. ಬೇರೆ ಬೇರೆ ತರಹದ ಕಥೆಗಳನ್ನು ಹೇಳಿ, ಒಂದು ಕರ್ಮದ ಸ್ತುತಿಯನ್ನು ಮಾಡುವುದು ಅರ್ಥವಾದದ ಉದ್ದೇಶವಾಗಿದೆ. ಅತಏವ ಈ ಅರ್ಥವಾದವನ್ನು 'ಸ್ವಾನಕ' ಎಂದೂ ಸಂಬೋಧಿಸುತ್ತಾರೆ. ಈ ಬ್ರಾಹ್ಮಣಗ್ರಂಥದಲ್ಲಿ ನಡುನಡುವೆ '**ಗಾಥಾ**'ಗಳು ಇವೆ. ಇವು ಅನುಷ್ಟುಪ್ ವೃತ್ತದ ಪದ್ಯಗಳಾಗಿವೆ. (೩) ಬ್ರಾಹ್ಮಣಗ್ರಂಥದ ಕಿನೆಯ ಭಾಗಕ್ಕೆ "**ಆರಣ್ಯಕ**' ಎಂದು ಹೆಸರು. ಆರಣ್ಯಕವೆಂದರೆ ಅರಣ್ಯಕ್ಕೆ ಯೋಗ್ಯವಾದದ್ದು; ಅಥವಾ ವಾನಪ್ರಸ್ಥಾಶ್ರಮದ ವಿಚಾರವನ್ನು ಕುರಿತು ವಿವೇಚನೆಯುಳ್ಳದ್ದು; ಅರ್ಥಾತ್ ಆರಣ್ಯಕಗಳ ಉದ್ದೇಶ, ವಿಷಯಗಳು, ಕರ್ಮವಿಧಿಯಿಂದ ತತ್ತ್ವಜ್ಞಾನದ

---

೧ ಸುಪ್ರಸಿದ್ಧ ಜ್ಯೋತಿಷಶಾಸ್ತ್ರಜ್ಞರೂ ಇತಿಹಾಸ ಸಂಶೋಧಕರೂ ಆದ ಶ್ರೀಮಾನ್ ಶಂಕರ ಬಾಳಕೃಷ್ಣ ದೀಕ್ಷಿತ ಇವರು, "ಕೃತ್ತಿಕಾ ವೈ ಪ್ರಾಚ್ಯೈ ದಿಶೋ ನ ಚ್ಯವನ್ತೇ |" ಎಂಬುದು ಶತಪಥ ಬ್ರಾಹ್ಮಣ ಗ್ರಂಥದಲ್ಲಿ ಒಂದು ವಾಕ್ಯವಿದೆ. ಈ ವಾಕ್ಯದ ಆಧಾರದಿಂದ ಗಣಿತವನ್ನು ಮಾಡಿ, ಕ್ರಿ. ಪೂ. ೩೦೦೦ ಶತಪಥ ಬ್ರಾಹ್ಮಣ ಗ್ರಂಥದ ಕಾಲವೆಂದು ನಿರ್ಣಯಿಸಿದ್ದಾರೆ. ಶ್ರೀಯಾಜ್ಞವಲ್ಕ್ಯರು ತಾವು ಆದಿತ್ಯಋಷಿಯಿಂದ ಸಂಪಾದಿಸಿದ ಶ್ರೀಶುಕ್ಲಯಜುರ್ವೇದದ ಬ್ರಾಹ್ಮಣವು ಮುಖೋದ್ಗತವಾಗಿದ್ದುದನ್ನು ಗ್ರಂಥಸ್ಥಮಾಡಿದ ಕಾಲವು ಇದೇ. ಅತಏವ ಶ್ರೀಯಾಜ್ಞವಲ್ಕ್ಯರ ಕಾಲ ಕ್ರಿ. ಪೂ. ೩೦೦೦ ಎಂದು ಇತ್ಯರ್ಥ. "ಶ್ರೀಯಾಜ್ಞವಲ್ಕ್ಯರು ಶುಕ್ಲಯಜುರ್ವೇದದ ಬ್ರಾಹ್ಮಣವನ್ನು ಗ್ರಂಥಸ್ಥಮಾಡಿದ ಬಳಿಕವೇ ಎಂದರೆ ಶತಪಥ ಬ್ರಾಹ್ಮಣಗ್ರಂಥವನ್ನು ನಿರ್ಮಿಸಿದ ಬಳಿಕವೇ ಇತರ ವೇದಗಳ ಬ್ರಾಹ್ಮಣಗಳು ಗ್ರಂಥಸ್ಥವಾದವು; ಎಂದರೆ ಇತರ ಬ್ರಾಹ್ಮಣಗ್ರಂಥಗಳು ನಿರ್ಮಿಸಲ್ಪಟ್ಟವೆಂಬುವೇ ನನ್ನ ಮತವಾಗಿದೆ" ಎಂದು ಶ್ರೀಮಾನ್ ಸಿ. ವ್ಹಿ. ವೈದ್ಯ ಎಮ್. ಎ., ಎಲ್‌ಎಲ್. ಬಿ. ಇವರು ತಾವು ಬರೆದ ಸಂಸ್ಕೃತ **ವಾಙ್ಮಯ**ದ ಇತಿಹಾಸದಲ್ಲಿ (ಪು. ೩೯) ಹೇಳಿದ್ದಾರೆ.

ಕಡೆಗೆ ಹೋಗುತ್ತಿದ್ದ ವಿಚಾರಗಳ ಸಂಕ್ರಮಣ ಸ್ಥಿತಿಯ ದ್ಯೋತಕಗಳಾಗಿವೆ. ಆರಣ್ಯಕಗಳ ಪ್ರಾಯಶಃ ಕೊನೆಯ ಭಾಗದಲ್ಲಿ ತತ್ತ್ವಜ್ಞಾನಾತ್ಮಕವಾದ ಉಪನಿಷತ್ತುಗಳು ಇವೆ.

ಋಗ್ವೇದದಲ್ಲಿ ಬ್ರಾಹ್ಮಣಗಳು ಎರಡು ಇವೆ (೧) ಆಶ್ವಲಾಯನ ಶಾಖೆಯ **ಐತರೇಯಬ್ರಾಹ್ಮಣ**(೨)ಶಾಂಖಾಯನಶಾಖೆಯ **ಕೌಷೀತಕೀ ಬ್ರಾಹ್ಮಣ**. ಈ ಪ್ರಕಾರ ಇವೆರಡು ಬ್ರಾಹ್ಮಣಗಳು ಋಗ್ವೇದಾನುಯಾಯಿಗಳಾಗಿವೆ. ಐತರೇಯ ಬ್ರಾಹ್ಮಣದ ಐತರೇಯ ಆರಣ್ಯಕದಲ್ಲಿ ಐತರೇಯ ಉಪನಿಷತ್ತು ಇದೆ. ಈ ಉಪನಿಷತ್ತಿಗೆ ದ್ವೈತಾದ್ವೈತ ವಿಶಿಷ್ಟಾದ್ವೈತ ಈ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಇದೇ ಮೇರೆಗೆ ಕೌಷೀತಕೀ ಬ್ರಾಹ್ಮಣದಲ್ಲಿ ಕೌಷೀತಕೀ ಉಪನಿಷತ್ತಿದೆ. ಈ ಉಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿರುವುದಿಲ್ಲ.

ಶುಕ್ಲಯಜುರ್ವೇದದಲ್ಲಿ 'ಶತಪಥಬ್ರಾಹ್ಮಣ' ಎಂಬುದೊಂದು ಬ್ರಾಹ್ಮಣಗ್ರಂಥವಿದೆ. ಇದರಲ್ಲಿ ೧೦೦ ಅಧ್ಯಾಯಗಳಿರುವುದರಿಂದ ಇದಕ್ಕೆ "**ಶತಪಥ** (ಎಂದರೆ ನೂರು ಮಾರ್ಗಗಳ) **ಬ್ರಾಹ್ಮಣ**" ಎಂಬ ಸಂಜ್ಞೆಯು ಪ್ರಾಪ್ತವಾಗಿದೆ. ಇದರಲ್ಲಿ ಕಾಣ್ವ ಮತ್ತು ಮಾಧ್ಯಂದಿನ ಎಂದು ಎರಡು ಪಾಠಭೇದಗಳಿವೆ. ಕಾಣ್ವಶಾಖೆಯ ಪಾಠದ ಶತಪಥ ಬ್ರಾಹ್ಮಣಗ್ರಂಥದಲ್ಲಿ ೧೭ ಕಾಂಡಗಳಿವೆ. ಮತ್ತು ಮಾಧ್ಯಂದಿನ ಶಾಖೆಯ ಪಾಠದ ಶತಪಥ ಬ್ರಾಹ್ಮಣದಲ್ಲಿ ೧೪ ಕಾಂಡಗಳಿವೆ. ಈ ಶತಪಥ ಬ್ರಾಹ್ಮಣದ ಆರಣ್ಯಕದ ಕೊನೆಯಲ್ಲಿ ಬೃಹದಾರಣ್ಯಕೋಪನಿಷತ್ತು ಇದೆ. ಈ ಉಪನಿಷತ್ತಿನಲ್ಲಿಯೂ ಕಾಣ್ವ, ಮಾಧ್ಯಂದಿನ ಎಂದು ಎರಡು ಪಾಠಗಳಿವೆ. ಕಾಣ್ವಪಾಠದ ಬೃಹದಾರಣ್ಯಕೋಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.

ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯಶಾಖೆಯ ಸಂಹಿತೆಯಲ್ಲಿರುವ ಗದ್ಯಭಾಗವೇ ಈ ಶಾಖೆಯ ಬ್ರಾಹ್ಮಣವಾಗಿದೆ. ಇದಲ್ಲದೆ "ತೈತ್ತಿರೀಯ ಬ್ರಾಹ್ಮಣ" ಎಂಬುದೊಂದು ಸ್ವತಂತ್ರಗ್ರಂಥವೂ ಇದೆ. ಪರಂತು ಆ

ಬ್ರಾಹ್ಮಣಗ್ರಂಥದಲ್ಲಿಯೂ ಈ ಸಂಹಿತಾಂತರ್ಗತ ಬ್ರಾಹ್ಮಣದಲ್ಲಿಯೂ ವಿಶೇಷ ಹೆಚ್ಚುಕಡಿಮೆ ಏನೂ ಇರದೆ, ಆ ಗ್ರಂಥವು ಪರಿಶಿಷ್ಟದೋಪಾದಿಯಲ್ಲಿವೆ. ತೈತ್ತಿರೀಯಬ್ರಾಹ್ಮಣದ ಪರಿಶಿಷ್ಟವಾದ ತೈತ್ತಿರೀಯ ಆರಣ್ಯಕದಲ್ಲಿ ತೈತ್ತಿರೀಯ ಉಪನಿಷತ್ತು' ಮತ್ತು "ಮಹಾನಾರಾಯಣೋಪನಿಷತ್ತು" ಎಂಬ ಎರಡು ಉಪನಿಷತ್ತುಗಳು ಇವೆ. ಇವುಗಳಲ್ಲಿ ತೈತ್ತಿರೀಯೋಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.

ಕೃಷ್ಣಯಜುರ್ವೇದದ ಕಠಶಾಖೆಯ ಸಂಹಿತೆಯಲ್ಲಿರುವ ಗದ್ಯಭಾಗವೇ ಈ ಶಾಖೆಯು ಬ್ರಾಹ್ಮಣವಾಗಿದೆ. ಈ ಶಾಖೆಯ ಕಠೋಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಕೃಷ್ಣಯಜುರ್ವೇದದ ಮೈತ್ರಾಯಣೀಯ ಶಾಖೆಯ ಸಂಹಿತೆಯಲ್ಲಿರುವ ಗದ್ಯಭಾಗವೇ ಈ ಶಾಖೆಯ ಬ್ರಾಹ್ಮಣವಾಗಿದೆ. ಈ ಶಾಖೆಯ ಉಪನಿಷತ್ತಿಗೆ "ಮೈತ್ರಾಣೀಯೋಪನಿಷತ್ತು" ಎಂದೆನ್ನುತ್ತಾರೆ. ಈ ಉಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿರುವುದಿಲ್ಲ.

ಸಾಮವೇದದಲ್ಲಿ ಮುಖ್ಯವಾಗಿ ೮ ಬ್ರಾಹ್ಮಣಗಳಿವೆ. ಅವು ಯಾವುವೆಂದರೆ:—(೧) **ಪ್ರೌಢಬ್ರಾಹ್ಮಣ**—ಇದಕ್ಕೆ "ಪಂಚವಿಂಶಬ್ರಾಹ್ಮಣ" ಅಥವಾ—"ತಾಂಡ್ಯಬ್ರಾಹ್ಮಣ" ಎಂಬ ಹೆಸರುಗಳು ಇವೆ. ಇದು ತಾಂಡಿನ್ ಶಾಖೆಯ—ಬ್ರಾಹ್ಮಣಗ್ರಂಥವಾಗಿದೆ. ಇದರಲ್ಲಿ ೨೫ ಕಾಂಡಗಳಿದ್ದು, ಸೋಮಯಜ್ಞದ ವಿಧಿಯ ವಿಷಯವಾಗಿಯೂ ಹಾಗೂ 'ವ್ರಾತ್ಯಷ್ಟೋಮ' ನಾಮಕ ಯಜ್ಞದ ವಿಧಿಯ ವಿಷಯವಾಗಿಯೂ ವಿವೇಚನೆಯಿದೆ. (೨) **ಷಡ್ವಿಂಶಬ್ರಾಹ್ಮಣ**:— ಇದರಲ್ಲಿ ೨೬ ಕಾಂಡಗಳಿದ್ದು ಆರು ಅಧ್ಯಾಯಗಳಿವೆ. ಇವುಗಳಲ್ಲಿ ಕೊನೆಯ ೬ ನೆಯ ಅಧ್ಯಾಯಕ್ಕೆ "ಅದ್ಭುತಬ್ರಾಹ್ಮಣ" ಎಂಬ ಸಂಜ್ಞೆಯಿದ್ದು, ಅದರಲ್ಲಿ ವಿವಿಧ ಅದ್ಭುತ ಪ್ರಸಂಗಗಳನ್ನು ಅಥವಾ ಅರಿಷ್ಟಗಳನ್ನು ಪರಿಹಾರಮಾಡುವುದು ಈ ಬ್ರಾಹ್ಮಣದ ಉದ್ದಿಷ್ಟವಿಷಯವಾಗಿದೆ. ಈ ಷಡ್ವಿಂಶಬ್ರಾಹ್ಮಣಗ್ರಂಥದಲ್ಲಿ "ಛಾಂದೋಗ್ಯ" ಎಂಬ ಮತ್ತೊಂದು ಉಪಬ್ರಾಹ್ಮಣವಿದೆ.

ಇವರಲ್ಲಿ " ಛಾಂದೋಗ್ಯ ಉಪನಿಷತ್ತು " ಇದೆ. (೩) **ಸಾಮವಿಧಾನ ಬ್ರಾಹ್ಮಣ** (೪) **ಆರ್ಷೇಯಬ್ರಾಹ್ಮಣ** (೫) **ದೇವತಾಧ್ಯಾಯಬ್ರಾಹ್ಮಣ** (೬) **ಉಪನಿಷದ್ಬ್ರಾಹ್ಮಣ**:— ಇದರಲ್ಲಿ '**ಕೇನ**' ನಾಮಕ ಉಪನಿಷತ್ತು ಇದೆ. (೭) **ಸಂಹಿತೋಪನಿಷದ್ಬ್ರಾಹ್ಮಣ** (೮) **ವಂಶ ಬ್ರಾಹ್ಮಣ** ಇದರಲ್ಲಿ ಸಾಮವೇದೀಯ ಆಚಾರ್ಯರ ವಂಶಾವಳಿಯಿದೆ. ಈ ಸಾಮವೇದದ ಕೇನ ಮತ್ತು ಛಾಂದೋಗ್ಯ ಉಪನಿಷತ್ತುಗಳಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.

ಅಥರ್ವವೇದದಲ್ಲಿ **ಗೋಪಥಬ್ರಾಹ್ಮಣ**:— ಇದು ವೈತಾನಸೂತ್ರಾನುಸಾರವಾಗಿ ಇದೆ. ಈ ಅಥರ್ವವೇದದ ಪಿಪ್ಪಲಾದ ಶಾಖೆಯ ಪ್ರಶ್ನೋಪನಿಷತ್ತಿಗೂ ಮುಂಡಕ ಮತ್ತು ಮಾಂಡೂಕ್ಯ ಉಪನಿಷತ್ತುಗಳಿಗೂ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.

ಹಾಗೆಯೇ ಶುಕ್ಲಯಜುರ್ವೇದದ ಕಾಣ್ವಸಂಹಿತೆಯಲ್ಲಿರುವ ಅರ್ಥಾತ್ ಮಂತ್ರೋಪನಿಷತ್ತಾದ ಈಶಾವಾಸ್ಯೋಪನಿಷತ್ತಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಈ ಉಪನಿಷತ್ತು ಸಂಹಿತೆಯಲ್ಲಿದ್ದುದರಿಂದ ಇದು, ಸರ್ವಉಪನಿಷತ್ತುಗಳಲ್ಲಿ ಜ್ಯೇಷ್ಠ ಉಪನಿಷತ್ತಾಗಿದೆ. ಅತಏವ ದಶೋಪನಿಷತ್ತುಗಳಲ್ಲಿ ಈ ಈಶೋಪನಿಷತ್ತಿಗೆ ಹೀಗೆ ಪ್ರಥಮಸ್ಥಾನವು ಪ್ರಾಪ್ತವಾಗಿದೆ.

ಈಶ ಕೇನ ಕಠ ಪ್ರಶ್ನ ಮುಣ್ಡ ಮಾಣ್ಡೂಕ್ಯ ತಿತ್ತಿರಿಃ |
ಐತರೇಯಂ ಚ ಛಾಂನ್ದೋಗ್ಯಂ ಬೃಹದಾರಣ್ಯಕಂ ತಥಾ||

(ಮುಕ್ತಿಕೋಪನಿಷತ್ ೩೦)

ಈ ಹತ್ತು ಉಪನಿಷತ್ತುಗಳಿಗೆ ತ್ರಿಮತಸ್ಥ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.



೩ನೆಯ ಪರಿಶಿಷ್ಟ

# ಶ್ರೌತಸೂತ್ರಗಳು, ಗೃಹ್ಯಸೂತ್ರಗಳು

ಹೇಗೆ ಆಧ್ಯಾತ್ಮಿಕ ಅಂಗದ ಬೆಳವಣಿಗೆಯು ಉಪನಿಷತ್ತುಗಳ ದ್ವಾರದಿಂದ ಆಯಿತೋ; ಮತ್ತು ಆ ಉಪನಿಷತ್ತುಗಳು ವೈದಿಕ ಅಧ್ಯಾತ್ಮ ಸಿದ್ಧಾಂತಗಳ ಪ್ರಮಾಣಭೂತ ಗ್ರಂಥಗಳಾದವೋ ಹಾಗೆಯೇ ಶ್ರೌತ ಸೂತ್ರಗಳೂ ಗೃಹ್ಯಸೂತ್ರಗಳೂ ಕರ್ಮಕಾಂಡದ ಆನುಷಂಗಿಕ ಗ್ರಂಥ ಗಳಾದವು. ಶ್ರೌತಸೂತ್ರಗಳಿಗೂ ಗೃಹ್ಯಸೂತ್ರಗಳಿಗೂ ಒಟ್ಟಿನಿಂದ 'ಕಲ್ಪಸೂತ್ರ' ಎಂಬ ಸಂಜ್ಞೆಯು ಪ್ರಾಪ್ತವಾಯಿತು.೧

## (೧) ಶ್ರೌತ ಸೂತ್ರಗ್ರಂಥಗಳು

ಬ್ರಾಹ್ಮಣಾಂತರ್ಗತ ಶ್ರೌತಕರ್ಮಗಳ ಮುಖೋದ್ಗತ ಪರಂಪರಾ ಗತ ಜ್ಞಾನದ ಸಾಹಾಯ್ಯದಿಂದ ಶ್ರೌತಸೂತ್ರಗಳು ಸಂಗ್ರಹಿಸಲ್ಪಟ್ಟಿವೆ.೨

---

೧ ವಸ್ತುತಃ ಕಲ್ಪಸೂತ್ರದಲ್ಲಿ-(೧) ಶ್ರೌತಸೂತ್ರಗಳು (೨) ಗೃಹ್ಯಸೂತ್ರಗಳು (೩) ಧರ್ಮಸೂತ್ರಗಳು ಎಂದು ಮೂರು ಭಾಗಗಳಿವೆ.

೨ ಬ್ರಾಹ್ಮಣ ಗ್ರಂಥಗಳಲ್ಲಿ ಯಜ್ಞಯಾಗಾದಿ ಶ್ರೌತಕರ್ಮಗಳ ವಿವೇಚನೆಯು, ಸ್ಥೂಲಮಾನದಿಂದ ಇದೆಯೇ ಹೊರತು ಸವಿಸ್ತರವಾಗಿಲ್ಲ. ಆದುದರಿಂದಲೇ ಯಜ್ಞಯಾಗಗಳ ಸವಿಸ್ತರ ವಿವೇಚನೆಯುಳ್ಳಂಥ ಶ್ರೌತಸೂತ್ರಗ್ರಂಥಗಳು ಪ್ರತ್ಯೇಕವಾಗಿ ನಿರ್ಮಾಣವಾಗಿವೆ. ಈ ಶ್ರೌತಸೂತ್ರಗಳಲ್ಲಿ ಯಜ್ಞಕ್ರಿಯೆಗಳ ವಿವೇಚನೆಯು ಸುವ್ಯವಸ್ಥಿತ ರೀತಿಯಿಂದಲೂ ವಿಸ್ತಾರವಾಗಿಯೂ ಇದೆ. ಅರ್ಥಾತ್ ಯಜ್ಞ ವಿಧಿಗಳ ಯಥಾರ್ಥಜ್ಞಾನ ಮಾಡಿಕೊಳ್ಳುವುದಕ್ಕೆ ಈ ಶ್ರೌತಸೂತ್ರಗಳು ಅತ್ಯಂತ ಆವಶ್ಯಕವಾಗಿರುತ್ತವೆಂದು ಇತ್ಯರ್ಥ.

## ಋಗ್ವೇದದ ಶ್ರೌತಸೂತ್ರಗ್ರಂಥಗಳು

ಋಗ್ವೇದದ ಶ್ರೌತಸೂತ್ರಗ್ರಂಥಗಳು ಎರಡು ಇವೆ. (೧) ಶಾಂಖಾಯನ ಶ್ರೌತಸೂತ್ರ. (೨) ಆಶ್ವಲಾಯನ ಶ್ರೌತಸೂತ್ರ. ಶಾಂಖಾಯನ ಶ್ರೌತಸೂತ್ರಗ್ರಂಥವು, ಶಾಂಖಾಯನ ಶಾಖೆಯ ಕೌಷೀತಕೀ ಬ್ರಾಹ್ಮಣಕ್ಕೆ ನಿಕಟ ಸಂಬಂಧವುಳ್ಳದ್ದಿದ್ದು, ಆಶ್ವಲಾಯನ ಶ್ರೌತ ಸೂತ್ರಗ್ರಂಥಕ್ಕಿಂತ ಪ್ರಾಚೀನವಾದದ್ದಾಗಿದೆ. ಈ ಶಾಂಖಾಯನ ಶ್ರೌತಸೂತ್ರಗ್ರಂಥದಲ್ಲಿ ೧೮ ಕಾಂಡಗಳಿವೆ.

ಆಶ್ವಲಾಯನ ಶ್ರೌತಸೂತ್ರಗ್ರಂಥದಲ್ಲಿ ೧೨ ಕಾಂಡಗಳಿದ್ದು, ಈ ಶ್ರೌತಸೂತ್ರಗ್ರಂಥವು ಆಶ್ವಲಾಯನ ಶಾಖೆಯ ಐತರೇಯ ಬ್ರಾಹ್ಮಣಕ್ಕೆ ನಿಕಟ ಸಂಬಂಧವುಳ್ಳದ್ದಾಗಿದೆ. ಆಶ್ವಲಾಯನ ಋಷಿಯು, ಐತರೇಯ ಆರಣ್ಯಕದ ನಾಲ್ಕನೆಯ ಕಾಂಡದ ಕರ್ತೃವಾಗಿದ್ದು, ಶೌನಕಋಷಿಯ ಶಿಷ್ಯನಿದ್ದನೆಂದು ಆಖ್ಯಾಯಿಕೆಯಿದೆ.

## ಶುಕ್ಲ ಯಜುರ್ವೇದದ ಶ್ರೌತಸೂತ್ರಗ್ರಂಥವು

ಕಾತ್ಯಾಯನಋಷಿ ಪ್ರಣೀತವಾದ ಶ್ರೌತಸೂತ್ರಗ್ರಂಥವೇ ಶುಕ್ಲ ಯಜುರ್ವೇದದ ಶ್ರೌತಸೂತ್ರಗ್ರಂಥವಾಗಿದೆ. ಈ ಕಾತ್ಯಾಯನ ಶ್ರೌತ ಸೂತ್ರಗ್ರಂಥದಲ್ಲಿ ೨೬ ಅಧ್ಯಾಯಗಳಿದ್ದು, ಅವುಗಳಲ್ಲಿಯ ಯಜ್ಞವಿಧಿಗಳ ಅನುಕ್ರಮವು, ಸಂಪೂರ್ಣವಾಗಿ ಶುಕ್ಲಯಜುರ್ವೇದದ ಶತಪಥ ಬ್ರಾಹ್ಮಣದಲ್ಲಿಯ ಅನುಕ್ರಮಾನುಸಾರವಾಗಿಯೇ ಇದೆ.

## ಕೃಷ್ಣ ಯಜುರ್ವೇದದ ಶ್ರೌತಸೂತ್ರಗ್ರಂಥಗಳು

ಕೃಷ್ಣಯಜುರ್ವೇದದ (೧) ತೈತ್ತಿರೀಯ ಶಾಖೆಯ ಶ್ರೌತಸೂತ್ರ ಗ್ರಂಥಗಳು ೬ ಇರುತ್ತವೆ. ಅವು ಯಾವುವೆಂದರೆ:— (I) ಆಪಸ್ತಂಬ (II) ಹಿರಣ್ಯಕೇಶೀ ಅಥವಾ ಸತ್ಯಾಷಾಢ (III) ಬೋಧಾಯನ (IV) ವಾಧೂಲ (V) ಭಾರದ್ವಾಜ (VI) ವೈಖಾನಸ

(೨) ಕಠಶಾಖೆಯ ಶ್ರೌತಸೂತ್ರಗ್ರಂಥವೆಂದರೆ, ಲೌಗಾಕ್ಷಿ ಶ್ರೌತ ಸೂತ್ರಗ್ರಂಥವೊಂದೇ ಇದೆ.

(೩) ಮೈತ್ರಾಯಣೀಯ ಶಾಖೆಗೆ ಮಾನವ ಶ್ರೌತಸೂತ್ರಗ್ರಂಥ ವೊಂದೇ ಇವೆ.

## ಸಾಮವೇದದ ಶ್ರೌತಸೂತ್ರಗ್ರಂಥಗಳು

(೧) ಮಶಕ ಶ್ರೌತಸೂತ್ರಗ್ರಂಥವು ಅತ್ಯಂತ ಪ್ರಾಚೀನವಾದದ್ದಾಗಿದೆ. ಈ ಗ್ರಂಥದಲ್ಲಿ ಪಂಚವಿಂಶ ಬ್ರಾಹ್ಮಣದಲ್ಲಿಯ ಅನುಕ್ರಮಾನುಸಾರವಾಗಿ ಸೋಮಯಜ್ಞವಿಧಿ ವಿಷಯಕ ಪ್ರಾರ್ಥನೆಗಳು ಇವೆ. ಈ ಗ್ರಂಥಕ್ಕೆ 'ಆರ್ಷೇಯ ಕಲ್ಪ' ಎಂದೂ ಹೆಸರಿದೆ.

(೨) ಲಾಟ್ಯಾಯನ ಶ್ರೌತಸೂತ್ರಗ್ರಂಥವು ಸಾಮವೇದದ ಕೌಥುಮ ಶಾಖೆಗೆ ಪ್ರಮಾಣಭೂತವಾದದ್ದಾಗಿದೆ. ಮಶಕಶ್ರೌತಸೂತ್ರಗ್ರಂಥದಂತೆಯೇ ಈ ಸೂತ್ರಗ್ರಂಥವು ಸಹ ಪಂಚವಿಂಶ ಬ್ರಾಹ್ಮಣಕ್ಕೆ ನಿಕಟ ಸಂಬಂಧವುಳ್ಳದ್ದಾಗಿದೆ.

(೩) ದ್ರಾಹ್ಯಾಯಣ ಶ್ರೌತಸೂತ್ರಗ್ರಂಥವು, ಸಾಮವೇದದ ರಾಣಾಯನೀಯ ಶಾಖೆಯ ಪ್ರಮಾಣಭೂತ ಸೂತ್ರಗ್ರಂಥವಾಗಿದೆ.

## ಅಥರ್ವವೇದದ ಶ್ರೌತಸೂತ್ರಗ್ರಂಥವು

"ವೈತಾನಸೂತ್ರ" ಎಂಬುದೊಂದು ಅಥರ್ವವೇದೀಯ ಶ್ರೌತ ಸೂತ್ರಗ್ರಂಥವಿದೆ. ಇದು ಶುಕ್ಲಯಜುರ್ವೇದದ ಕಾತ್ಯಾಯನ ಶ್ರೌತ ಸೂತ್ರಕ್ಕನುಸರಿಸಿ ಇದೆ. ಈ ವೈತಾನ ಸೂತ್ರಗ್ರಂಥದಲ್ಲಿಯ ಬಹು ಭಾಗವು ಅಥರ್ವವೇದದ ಗೋಪಥ ಬ್ರಾಹ್ಮಣಕ್ಕೆ ನಿಕಟ ಸಂಬಂಧವುಳ್ಳದ್ದಾಗಿದೆ.

## (೨) ಗೃಹ್ಯ ಸೂತ್ರಗ್ರಂಥಗಳು

ಬ್ರಾಹ್ಮಣಗ್ರಂಥಗಳಲ್ಲಿ ಅಥವಾ ಶ್ರೌತಸೂತ್ರಗ್ರಂಥಗಳಲ್ಲಿ ಗೃಹ್ಯ ಕರ್ಮಗಳ ವಿಷಯವಾಗಿ ಏನನ್ನೂ ವಿಚಾರಮಾಡಿರುವುದಿಲ್ಲ. ಆದುದರಿಂದಲೇ ಗೃಹ್ಯವಿಧಿಗಳನ್ನು ಪೂರ್ವಪರಂಪರೆಗೆ ಅನುಸರಿಸಿ, ಗೃಹ್ಯ ಸೂತ್ರಗ್ರಂಥಗಳಲ್ಲಿ ಸುವ್ಯವಸ್ಥಿತವಾಗಿ ವಿವೇಚಿಸಬೇಕಾಯಿತು. ಅರ್ಥಾತ್ ಗೃಹ್ಯಸೂತ್ರಗ್ರಂಥಗಳನ್ನು ಪೃಥಕ್ಕಾಗಿ ನಿರ್ಮಿಸಬೇಕಾಯಿತು. ಎಲ್ಲ

ಗೃಹ್ಯಸೂತ್ರಗಳು ಶ್ರೌತಸೂತ್ರಗಳಿಗನುಸರಿಸಿ ಇವೆ. ಆದರೆ ಅಥರ್ವ ವೇದವ ವೈತಾನ ಶ್ರೌತಸೂತ್ರವೇ, ಆ ವೇದದ ಕೌಶಿಕ ಗೃಹ್ಯಸೂತ್ರಾನುಸಾರವಾಗಿದೆ; ಅದೊಂದೇ ಈ ರೀತಿ ವಿಚಿತ್ರವಾಗಿದೆ.

## ಋಗ್ವೇದದ ಗೃಹ್ಯಸೂತ್ರಗ್ರಂಥಗಳು

(೧) ಶಾಂಖಾಯನ ಗೃಹ್ಯಸೂತ್ರಗ್ರಂಥವು ಎಲ್ಲಕ್ಕೂ ಮೊದಲಿನ ಋಗ್ವೇದೀಯ ಗೃಹ್ಯಸೂತ್ರಗ್ರಂಥವಾಗಿದೆ. (೨) ಆಶ್ವಲಾಯನ ಗೃಹ್ಯಸೂತ್ರಗ್ರಂಥವು ಐತರೇಯ ಬ್ರಾಹ್ಮಣಕ್ಕೆ ಅತಿಶಯ ನಿಕಟ ಸಂಬಂಧವುಳ್ಳದ್ದಾಗಿದೆ. (೩) ಶಾಂಭವ್ಯ ಗೃಹ್ಯಸೂತ್ರಗ್ರಂಥವು ಕೌಷೀತಕೀ ಶಾಖೆಗೆ ನಿಕಟ ಸಂಬಂಧವುಳ್ಳದ್ದಾಗಿದೆ.

## ಶುಕ್ಲಯಜುರ್ವೇದದ ಗೃಹ್ಯಸೂತ್ರಗ್ರಂಥವು

ಪಾರಸ್ಕರ ಗೃಹ್ಯಸೂತ್ರಗ್ರಂಥವು ಶುಕ್ಲಯಜುರ್ವೇದೀಯ ಗೃಹ್ಯಸೂತ್ರಗ್ರಂಥವಾಗಿದೆ. ಈ ಗ್ರಂಥಕ್ಕೆ 'ಕಾತೀಯ' ಅಥವಾ 'ವಾಜಸನೇಯ' ಗೃಹ್ಯಸೂತ್ರ ಎಂದೂ ಹೆಸರು ಇದೆ. ಈ ಪಾರಸ್ಕರ ಗೃಹ್ಯಸೂತ್ರಗ್ರಂಥವು ಕಾತ್ಯಾಯನ ಶ್ರೌತಸೂತ್ರಗ್ರಂಥಕ್ಕೆ ಅತ್ಯಂತ ನಿಕಟ ಸಂಬಂಧವಿದ್ದುದರಿಂದ ಈ ಪಾರಸ್ಕರ ಗೃಹ್ಯಸೂತ್ರಗ್ರಂಥವನ್ನು ಕಾತ್ಯಾಯನ ಗೃಹ್ಯಸೂತ್ರಗ್ರಂಥವೆಂದು ಸಂಬೋಧಿಸುತ್ತಾರೆ. ಇಷ್ಟೇ ಅಲ್ಲ, ಕೆಲವರು ಪಾರಸ್ಕರ ಋಷಿಗಳೂ ಕಾತ್ಯಾಯನ ಋಷಿಗಳೂ ಅಭಿನ್ನರೆಂದು (ಎಂದರೆ ಒಬ್ಬರೇ ಎಂದು) ತಿಳಿಯುತ್ತಾರೆ.

## ಕೃಷ್ಣಯಜುರ್ವೇದದ ಗೃಹ್ಯಸೂತ್ರಗ್ರಂಥಗಳು

ಕೃಷ್ಣಯಜುರ್ವೇದೀಯ ಗೃಹ್ಯಸೂತ್ರಗ್ರಂಥಗಳು ೮ ಇರುತ್ತವೆ. ಇವುಗಳಲ್ಲಿ ಕೃಷ್ಣಯಜುರ್ವೇದದ **ತೈತ್ತಿರೀಯ ಶಾಖೆಯ** ೬ ಗೃಹ್ಯಸೂತ್ರಗ್ರಂಥಗಳು ಹೀಗೆ ಇರುತ್ತವೆ:—(೧) ಆಪಸ್ತಂಬ (೨) ಹಿರಣ್ಯಕೇಶೀ (೩) ಬೌಧಾಯನ (೪) ಭಾರದ್ವಾಜ (೫) ವೈಖಾನಸ (೬) ವಾಧೂಲ. **ಕಠಶಾಖೆಯ** ಕಾಠಕ ಗೃಹ್ಯಸೂತ್ರಗ್ರಂಥವು, ರಚನಾಪದ್ಧತಿಯಲ್ಲಿ ಮಾನವ ಗೃಹ್ಯಸೂತ್ರಗ್ರಂಥಕ್ಕೆ ಸದೃಶವಾಗಿದೆ. **ಮೈತ್ರಾಯಣೀಯ ಶಾಖೆಗೆ** 'ಮಾನವ' ಎಂಬ ಹೆಸರಿನ ಗೃಹ್ಯಸೂತ್ರಗ್ರಂಥವಿದೆ.

## ಸಾಮವೇದದ ಗೃಹ್ಯಸೂತ್ರಗ್ರಂಥಗಳು

(೧) **ಗೋಭಿಲ** ಗೃಹ್ಯಸೂತ್ರಗ್ರಂಥವು, ಸಾಮವೇದೀಯ ಪ್ರಮುಖವಾದ ಗೃಹ್ಯಸೂತ್ರಗ್ರಂಥವಾಗಿದ್ದು, ಸರ್ವ ಗೃಹ್ಯಸೂತ್ರ ಗ್ರಂಥಗಳಲ್ಲಿ ಇದು, ಅತ್ಯಂತ ಪ್ರಾಚೀನವೂ ಸಂಪೂರ್ಣವೂ ಹಾಗೂ ಅತ್ಯಂತ ಮನೋಹರವೂ ಆಗಿರುತ್ತದೆ. ಸಾಮವೇದದ ರಾಣಾಯನೀಯ, ಕೌಥುಮ ಇವೆರಡೂ ಶಾಖೆಗಳ ಬ್ರಾಹ್ಮಣರು ಈ ಗೃಹ್ಯ ಸೂತ್ರಗ್ರಂಥದ ಉಪಯೋಗವನ್ನು ಮಾಡುತ್ತಿರುತ್ತಾರೆ. (೨) **ಖಾದಿರ** ಅಥವಾ ದ್ರಾಹ್ಯಾಯಣ ಗೃಹ್ಯಸೂತ್ರಗ್ರಂಥವು; ಇದನ್ನು ಸಾಮವೇದದ ರಾಣಾಯನೀಯ ಶಾಖೆಯವರು ಮಾನ್ಯಮಾಡಿದ್ದಾರೆ. ಇದು, ಗೋಭಿಲ ಗೃಹ್ಯಸೂತ್ರದ ಸಂಕ್ಷಿಪ್ತ ರೂಪಾಂತರವಾಗಿದೆ.

## ಅಥರ್ವವೇದದ ಗೃಹ್ಯಸೂತ್ರಗ್ರಂಥವು

ಕೌಶಿಕಗೃಹ್ಯಸೂತ್ರಗ್ರಂಥವು ಅಥರ್ವವೇದೀಯವಾಗಿದ್ದು, ಬಹಳ ಮಹತ್ವದ್ದಾಗಿದೆ. ಇದರಲ್ಲಿ ಗೃಹ್ಯಕರ್ಮಗಳ ವಿಷಯವಾಗಿ ಮಹತ್ವದ ನಿಯಮಗಳು ಇದ್ದುದಲ್ಲದೆ, ಅಥರ್ವವೇದಕ್ಕೆ ಸಂಬಂಧಿಸಿದ ಅಭಿಚಾರಾದಿ ಮಂತ್ರತಂತ್ರಗಳ ವಿಚಾರವೂ ಇದೆ.



೪ನೆಯ ಪರಿಶಿಷ್ಟ

# ಶುಕ್ಲಯಜುರ್ವೇದದ ಪದ್ಧತಿಯು ಪ್ರಾಚೀನವಾದದ್ದು.



ಶ್ರೀಶುಕ್ಲಯಜುರ್ವೇದವು, ಶ್ರೀಕೃಷ್ಣಯಜುರ್ವೇದವು ನಾಮತಃ ಭಿನ್ನವಾಗಿದ್ದರೂ ವಸ್ತುತಃ ಒಂದೇ. ಇವೆರಡು ಯಜುರ್ವೇದಗಳು ಪದ್ಧತಿಯಿಂದ ಭಿನ್ನವಾಗಿ ತೋರಿದರೂ ಮೂಲತಃ ಒಂದೇ ಯಜುರ್ವೇದವಾಗಿದೆ. ಇವೆರಡು ಯಜುರ್ವೇದಗಳಲ್ಲಿ ಯಾವ ಯಜುರ್ವೇದದ ಪದ್ಧತಿಯು ಪ್ರಾಚೀನವಾದದ್ದು; ಯಾವ ಯಜುರ್ವೇದದ ಪದ್ಧತಿಯು ಅರ್ವಾಚೀನವಾದದ್ದು. ಎಂಬುದನ್ನು ನಿರೂಪಿಸುವುದೇ ಈ ೪ ನೆಯ ಪರಿಶಿಷ್ಟದ ಉದ್ದೇಶವಾಗಿದೆ.

ಕೃತ, ತ್ರೇತಾಯುಗಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಇವು ಮೂರೇ ವೇದಗಳಿದ್ದವು. ಇವುಗಳಿಗೆ "**ವೇದತ್ರಯೀ**" ಎಂಬ ಹೆಸರು ಇರುತ್ತದೆಂಬುದನ್ನು ಹಿಂದೆಯೇ ನೋಡಿದ್ದೇವೆ. ಎಂದರೆ ಕೃತ, ತ್ರೇತಾಯುಗಗಳಲ್ಲಿ ಯಜುರ್ವೇದವು ಒಂದೇ ಒಂದಾಗಿದ್ದಿತೇ ಹೊರತು ಎರಡು ಯಜುರ್ವೇದಗಳಾಗಿದ್ದಿಲ್ಲವೆಂಬುದು ಸ್ಪಷ್ಟವಾಯಿತು.

ಶ್ರೀವೇದವ್ಯಾಸ ಮಹರ್ಷಿಗಳು ವರಾಹಪುರಾಣದ ೨೪೪ ನೆಯ ಅಧ್ಯಾಯದಲ್ಲಿ ಶ್ರೀಶುಕ್ಲಯಜುರ್ವೇದವು ಪ್ರಾಚೀನ ಯಜುರ್ವೇದವೆಂಬುದನ್ನು ಚೆನ್ನಾಗಿ ಹೀಗೆ ವ್ಯಕ್ತಪಡಿಸಿದ್ದಾರೆ:—

೧ಹಯಗ್ರೀವಃ ಕದಾಚಿತ್ತು ಸುರದ್ವೇಷೀ ಮಹಾಬಲಃ ।
ಸುರಾಣಾಮಪಕಾರಾಯ ವೇದಾನಾಹೃತ್ಯ ಚೌರ್ಯತಃ ॥ ೧ ॥
ಭಕ್ಷಯಿತ್ವಾ ಬಹೂನ್ ವೇದಾನ್ ಪಾತಾಲಂ ಸಮಾವಿಶತ್ ।
ದೈತ್ಯಂ ವಿದಾರ್ಯ ತಾನ್ ವೇದಾನ್ ಬ್ರಹ್ಮಣೇ ಪ್ರದದೌ ಹರಿಃ ॥೨॥
ತತೋ ಜಗಾದ ಸೂರ್ಯಾಯ ಸರ್ಗಾದೌ ಚತುರಾನನಃ ।
ದ್ವಾಪರಾದೌ ತತೋಯೋಗೀ ಪಾರಾಶರ್ಯೋ ಮಹಾತಪಾಃ ॥೩॥
ಅವತೀರ್ಯಾಥ ತಾನ್ ವೇದಾನ್ ಸ್ವಶಿಷ್ಯೇಭ್ಯ ಉವಾಚ ಹ ।
ಯಜೂಂಷ್ಯಯಾತಯಾಮಾನಿ ಸೂರ್ಯಮಧ್ಯಾಪ್ಯ ಚಿಕ್ಷಿಪೇ ॥೪॥
ಶುಕ್ಲಾನ್ಯಯಾತಯಾಮಾನಿ ಯಜೂಂಷಿ ಪ್ರಾಪ್ಯ ಭಾಸ್ವತಃ ।
ಶಾಖಾಶ್ಚಕ್ರೇ ಪಂಚದಶ ಕಣ್ವಾದ್ಯಾಶ್ಚ ಮಹಾಮುನಿಃ ॥೫॥

ಅರ್ಥ:—ಒಂದಾನೊಂದು ಕಾಲದಲ್ಲಿ ದೇವತೆಗಳ ವೈರಿಯಾದ ಮತ್ತು ಮಹಾಬಲಿಷ್ಠನಾದ ಹಯಗ್ರೀವನೆಂಬ ದೈತ್ಯನು ದೇವತೆಗಳಿಗೆ (=ಸುರರಿಗೆ) ಕೇಡುಬಗೆಯಬೇಕೆಂದು ಕಳ್ಳತನದಿಂದ ವೇದಗಳನ್ನು ಅಪಹರಿಸಿ, ಅವುಗಳನ್ನು ತಿಂದು, ಪಾತಾಲಲೋಕವನ್ನು ಪ್ರವೇಶಿಸಿದನು. ಶ್ರೀಹರಿಯು ಆ ದೈತ್ಯನನ್ನು ಸಂಹರಿಸಿ, ಚತುರ್ಮುಖ ಬ್ರಹ್ಮನಿಗೆ ಆ ವೇದಗಳನ್ನು ಕೊಟ್ಟನು. (ಶ್ಲೋ. ೧।೨). ಆ ಚತುರ್ಮುಖ ಬ್ರಹ್ಮನು, ಸರ್ಗಾದಿಯಲ್ಲಿ ಎಂದರೆ ಸೃಷ್ಟಿಯ ಉತ್ಪತ್ತಿಯ ಆದಿಯಲ್ಲಿ ಅರ್ಥಾತ್ ಕೃತಯುಗದ ಆದಿಯಲ್ಲಿ ಸೂರ್ಯದೇವತೆಗೆ ಯಜುರ್ವೇದವನ್ನು (ಅತಏವ ಶುಕ್ಲಯಜುರ್ವೇದವನ್ನು) ಕೊಟ್ಟನು. ತದನಂತರ ದ್ವಾಪರಯುಗದ ಆದಿಯಲ್ಲಿ ಮಹಾತಪಸ್ವಿಗಳಾದ ಪಾರಾಶರ್ಯರು ಎಂದರೆ ವೇದವ್ಯಾಸ ಋಷಿಗಳು ಅವತರಿಸಿ, ಆ ವೇದಗಳನ್ನು

---

೧ ವರಾಹಪುರಾಣದ ಈ ೨೪೪ ನೆಯ ಅಧ್ಯಾಯವನ್ನು ಅನಂತಾಚಾರ್ಯರು ಕಣ್ವಕಂಠಾಭರಣವೆಂಬ ಗ್ರಂಥದಲ್ಲಿ ವರಾಹಪುರಾಣದಿಂದ ತೆಗೆದುಕೊಂಡದ್ದನ್ನು ಉಲ್ಲೇಖ ಮಾಡಿದ್ದಾರೆ.

ತಮ್ಮ ಶಿಷ್ಯರಿಗೆ ಉಪದೇಶಮಾಡಿದರು. ಅರ್ಥಾತ್ ವ್ಯಾಸರು ಶುದ್ಧ (=ಶುಕ್ಲ) ಯಜುರ್ವೇದವನ್ನು ಸೂರ್ಯಋಷಿಗೆ ಉಪದೇಶಮಾಡಿದರು. ಶ್ರೀಯಾಜ್ಞವಲ್ಕ್ಯ ಮಹಾಮುನಿಗಳು ಆ ಸೂರ್ಯಋಷಿಯಿಂದ **ಈ** **ಶುಕ್ಲ**ಯಜುರ್ವೇದವನ್ನು ಕಲಿತು, ಕಣ್ವ ಮೊದಲಾದ ೧೫ ಶಾಖೆಗಳನ್ನು **ಏರ್ಪ**ಡಿಸಿದರು. (ಶ್ಲೋ. ೩|೪|೫)

ಇದೇ ಸಂಗತಿಯನ್ನು ಶ್ರೀಮಧ್ವಾಚಾರ್ಯರು ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದ ಉಪಕ್ರಮದಲ್ಲಿಯೂ ಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥದ ೧೦ನೆಯ ಅಧ್ಯಾಯದಲ್ಲಿಯೂ ಹೀಗೆ ಹೇಳಿದ್ದಾರೆ:—

೨ಯಥಾ ತುಷ್ಟಾವ ಲಕ್ಷ್ಮೀಶಂ ಸರ್ಗಾದೌ ಚತುರಾನನಃ।
ತಥಾ ಜಗಾದ ಸೂರ್ಯಾಯ ಯಾಜ್ಞವಲ್ಕ್ಯಾಯ
ಸೋಽಬ್ರವೀತ್ ॥ ೨ ॥

(ಶ್ರೀಮಧ್ವಾಚಾರ್ಯಕೃತ ಬೃಹದಾರಣ್ಯಭಾಷ್ಯ)

ಅರ್ಥ:— ಸೃಷ್ಟಿಯ ಉತ್ಪತ್ತಿಯ ಆದಿಯಲ್ಲಿ ಚತುರ್ಮುಖ ಬ್ರಹ್ಮನು ಹೇಗೆ ಲಕ್ಷ್ಮೀಶನನ್ನು ಸ್ತುತಿಸಿದನೋ, ಹಾಗೆಯೇ ಸೂರ್ಯ ದೇವತೆಗೆ ಶುಕ್ಲಯಜುರ್ವೇದವನ್ನು ಉಪದೇಶಮಾಡಿದನು. ಆ ಸೂರ್ಯ ದೇವತೆಯು (ವಾಜಿರೂಪವನ್ನು ಧಾರಣಮಾಡಿ, ಎಂದರೆ ಸೂರ್ಯ ಋಷಿಯ ರೂಪವನ್ನು ಧರಿಸಿ,) ಯಾಜ್ಞವಲ್ಕ್ಯರಿಗೆ ಈ ಶುಕ್ಲಯಜು ರ್ವೇದವನ್ನು ಕಲಿಸಿದನು.

ಋಚಾಂ ಪ್ರವರ್ತಕಂ **ಪೈಲಂ** ಯಜುಷಾಂಚ ಪ್ರವರ್ತಕಂ।
**ವೈಶಂಪಾಯನ**ಮೇವೈಕಂ ದ್ವಿತೀಯಂ **ಸೂರ್ಯ**ಮೇವ ಚ
॥ ೭೬ ॥

---

೨ **ಈ** ಶ್ಲೋಕವನ್ನು ಎಂದರೆ ಈ ಸಂಗತಿಯನ್ನು ವರಾಹ ಪುರಾಣದ ಆಧಾರದಿಂದಲೇ ಹೇಳಿದ್ದೇವೆ. ಎಂದು ಶ್ರೀಮಧ್ವಾಚಾರ್ಯರು ಕಂಠೋಕ್ತವಾಗಿ ನುಡಿದಿದ್ದಾರೆ.

ಚಕ್ರೇಽಥ ಜೈಮಿನಿಂ ಸಾಮ್ನಾಮಥರ್ವಾಂಗಿರಸಾಮಪಿ ।
**ಸುಮಂತುಂ** ಭಾರತಸ್ಯಾಪಿ ವೈಶಂಪಾಯನಮಾದಿಶತ್* ॥ ೭೭ ॥

(ಭಾರತ ತಾತ್ಪರ್ಯ ನಿರ್ಣಯ ಅ. ೧೦)

ಎಂದರೆ, ವೇದವ್ಯಾಸ ಋಷಿಗಳು— ಪೈಲ ಋಷಿಗೆ ಋಗ್ವೇದವನ್ನೂ, ವೈಶಂಪಾಯನ ಋಷಿಗೆ ಕೃಷ್ಣಯಜುರ್ವೇದವನ್ನೂ, ಸೂರ್ಯ ಋಷಿಗೆ ಶುಕ್ಲಯಜುರ್ವೇದವನ್ನೂ ಹಾಗೂ ಜೈಮಿನಿ ಋಷಿಗೆ ಸಾಮವೇದವನ್ನೂ ಸುಮಂತು ಋಷಿಗೆ ಅಥರ್ವವೇದವನ್ನೂ, ಉಪದೇಶಮಾಡಿ, ಇವರೆಲ್ಲರನ್ನು ಆಯಾ ವೇದದ ಪ್ರವರ್ತಕರನ್ನಾಗಿ ಮಾಡಿದರೆಂದು ಇತ್ಯರ್ಥ.

(I) ವ್ಯಾಸಮಹರ್ಷಿಗಳು ವರಾಹಪುರಾಣದಲ್ಲಿ— ಚತುರ್ಮುಖ ಬ್ರಹ್ಮನು ಸೂರ್ಯದೇವತೆಗೆ **ಶ್ರೀಶುಕ್ಲ ಯಜುರ್ವೇದವನ್ನು ಸರ್ಗಾದಿಯಲ್ಲಿ ಉಪದೇಶ**ಮಾಡಿದನು. ಎಂದು ಹೇಳಿರುವುದರಿಂದ ಈ ಶುಕ್ಲಯಜುರ್ವೇದವು ಪ್ರಾಚೀನ ಯಜುರ್ವೇದವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಅರ್ಥಾತ್ ಈ ಉಕ್ತಿಯು ಶುಕ್ಲಯಜುರ್ವೇದದ ಪ್ರಾಚೀನತ್ವದ ಗಮಕವಾಗಿರುತ್ತದೆಂದು ಇತ್ಯರ್ಥ.

(II) ಶತಪಥ ಬ್ರಾಹ್ಮಣದಲ್ಲಿಯೂ ಮನುಸ್ಮೃತಿಯಲ್ಲಿಯೂ "ಅಗ್ನಿಯಿಂದ ಋಗ್ವೇದವೂ, ವಾಯುವಿನಿಂದ ಯಜುರ್ವೇದವೂ ಹಾಗೂ ಸೂರ್ಯನಿಂದ ಸಾಮವೇದವೂ ಪ್ರಕಟವಾದವೆ"ಂದು ಹೀಗೆ ಸ್ಪಷ್ಟವಾಗಿ ಉಲ್ಲೇಖವಿದೆ:—

"ತೇಭ್ಯಸ್ತಪ್ತೇಭ್ಯಸ್ತ್ರಯೋ ವೇದಾ ಅಜಾಯನ್ತ । ಅಗ್ನೇರ್ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾಮವೇದಃ ।"

(ಶತಪಥ ಬ್ರಾಹ್ಮಣ ೧,೧,೫,೮)

---

* ಶ್ರೀವೇದವ್ಯಾಸ ಮಹರ್ಷಿಗಳು ವೈಶಂಪಾಯನ ಋಷಿಗಳನ್ನು ಭಾರತಕ್ಕೂ ಸಹ ಪ್ರವರ್ತಕರನ್ನಾಗಿ ಮಾಡಿದರು.

ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಮ್ ।
ದುದೋಹ ಯಜ್ಞಸಿದ್ಧ್ಯರ್ಥಮೃಗ್ಯಜುಃಸಾಮಲಕ್ಷಣಮ್ ॥

(ಮನುಸ್ಮೃತಿ ಅ. ೧, ಶ್ಲೋ. ೨೩)

ಅರ್ಥ:—ಬ್ರಹ್ಮದೇವನು ಯಜ್ಞದ ಸಿದ್ಧಿಗೋಸ್ಕರ ಅಗ್ನಿ, ವಾಯು, ಮತ್ತು ಸೂರ್ಯ ಇವರಿಂದ ಅನುಕ್ರಮವಾಗಿ ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರು ನಿತ್ಯವೇದಗಳನ್ನು ಆಕರ್ಷಣ ಮಾಡಿದನು.

ಯಜುರ್ವೇದವು ವಾಯುವಿನಿಂದ ಉತ್ಪನ್ನವಾದ್ದರಿಂದ ಅಥವಾ ಪ್ರಕಟವಾದುದರಿಂದ ಯಜುರ್ವೇದಕ್ಕೆ ಋಷಿಯೂ ವಾಯು; ದೇವತೆಯೂ ವಾಯು. ಇರುವುದು ಕ್ರಮಪ್ರಾಪ್ತವಾಗಿವೆ. ಕಿಂಬಹುನಾ ಅಪರಿಹಾರ್ಯವಾಗಿದೆ.

ಶುಕ್ಲಯಜುರ್ವೇದ ಸಂಹಿತೆಯ ಋಷಿ, ದೇವತಾ, ಛಂದಸ್ಸು, ವಿನಿಯೋಗಗಳನ್ನು ಹೀಗೆ ಪಠಿಸುತ್ತಾರೆ:—

"ಶುಕ್ಲಯಜುರ್ವೇದಸ್ಯ ವಾಯುರ್ಋಷಿಃ, ವಾಯುರ್ದೇವತಾ, ತ್ರಿಷ್ಟುಪ್‌ಛನ್ದಃ ಸಂಹಿತಾಧ್ಯಯನೇ ವಿನಿಯೋಗಃ''

ಶುಕ್ಲಯಜುರ್ವೇದದ ಋಷಿಯೂ ವಾಯು; ದೇವತೆಯೂ ವಾಯು ಇರುವುದರಿಂದ ಈ ಶುಕ್ಲಯಜುರ್ವೇದವು, ವಾಯುವಿನಿಂದ ಉತ್ಪನ್ನವಾದ ಅಥವಾ ಪ್ರಕಟವಾದ ಮೂಲ ಪ್ರಾಚೀನ ಯಜುರ್ವೇದವೆಂಬುದು ಸಿದ್ಧ. ಕೃಷ್ಣಯಜುರ್ವೇದದ ಋಷಿ, ದೇವತಾ, ಛಂದಸ್ಸು, ವಿನಿಯೋಗಗಳನ್ನು ಹೀಗೆ ಪಠಿಸುವ ಸಾಂಪ್ರದಾಯವಿಲ್ಲ.

(III) ಪ್ರಾಚೀನ ವೇದತ್ರಯಿಯಲ್ಲಿಯ ಋಗ್ವೇದ, ಸಾಮವೇದಗಳ ಪದ್ಧತಿಯಂತೆಯೇ ಶುಕ್ಲಯಜುರ್ವೇದದ ಪದ್ಧತಿಯಾಗಿದೆ. ಅದು ಹೇಗೆಂದರೆ, ಪ್ರಾಚೀನ ವೇದಗಳಾದ ಋಗ್ವೇದ, ಸಾಮವೇದಗಳಲ್ಲಿ ಸಂಹಿತೆಯು ಪ್ರತ್ಯೇಕವಾಗಿದೆ; ಬ್ರಾಹ್ಮಣವು ಪ್ರತ್ಯೇಕವಾಗಿದೆ. ಎಂದರೆ ಸಂಹಿತೆ, ಬ್ರಾಹ್ಮಣಗಳು ಪೃಥಕ್ ಪೃಥಕ್ಕಾಗಿ ಇವೆ. ಇದೇ ಪದ್ಧತಿಯು

ಶುಕ್ಲಯಜುರ್ವೇದದಲ್ಲಿ ಇದೆ. ಎಂದರೆ ಸಂಹಿತೆಯು ಪ್ರತ್ಯೇಕವಾಗಿದೆ; ಬ್ರಾಹ್ಮಣವು ಪ್ರತ್ಯೇಕವಾಗಿದೆ, ಅರ್ಥಾತ್ ಶುಕ್ಲಯಜುರ್ವೇದದಲ್ಲಿಯೂ ಸಂಹಿತೆ ಬ್ರಾಹ್ಮಣಗಳು ಪೃಥಕ್ ಪೃಥಕ್ಕಾಗಿವೆ. ಅತಏವ ಪ್ರಾಚೀನ ವೇದಗಳಾದ ಋಗ್ವೇದ ಸಾಮವೇದಗಳ ಪದ್ಧತಿಯಂತೆಯೇ ಶುಕ್ಲಯಜುರ್ವೇದದ ಪದ್ಧತಿಯೂ ಪ್ರಾಚೀನವಾಗಿರುತ್ತದೆಂಬುದು ಸಿದ್ಧ. ಕೃಷ್ಣಯಜುರ್ವೇದದ ಪದ್ಧತಿಯು ಋಗ್ವೇದ, ಸಾಮವೇದಗಳಂತೆ ಇರದೆ, ಸಂಹಿತೆಯು ಬ್ರಾಹ್ಮಣದಿಂದ ಮಿಶ್ರವಾಗಿದೆ. ಅರ್ಥಾತ್ ಈ ಕೃಷ್ಣಯಜುರ್ವೇದದ ಪದ್ಧತಿಯು ಪ್ರಾಚೀನವಾಗಿರದೆ, ದ್ವಾಪರಯುಗದಲ್ಲಿ ವೇದವ್ಯಾಸರಿಂದ ನಿರ್ಮಾಣವಾದದ್ದಾಗಿದೆ. ಅತಏವ ಕೃಷ್ಣಯಜುರ್ವೇದದ ಪದ್ಧತಿಯು ಅರ್ವಾಚೀನವಾಗಿದೆ.



# ಹಿನ್ನುಡಿ

ಶ್ರೀಯಾಜ್ಞವಲ್ಕ್ಯಮಹಾಮುನಿಗಳ ಚರಿತ್ರೆಯನ್ನು **ಚಿಕಿತ್ಸಕ** ದೃಷ್ಟಿಯಿಂದ ಅಭ್ಯಾಸಮಾಡಲುಪಕ್ರಮಿಸಿ, ಬಹುದಿವಸಗಳಾಗಿದ್ದು, ಇಂದು ಶ್ರೀಹರಿ,ಗುರುಗಳ ಕೃಪೆಯಿಂದ ಈ ದೀರ್ಘಕಾಲೀನ ಅಭ್ಯಾಸವು, ಪರಿಪೂರ್ಣವಾಗಿ ಪುಸ್ತಕರೂಪದಿಂದ ಮುದ್ರಿಸಿ ಪ್ರಸಿದ್ಧವಾದದ್ದನ್ನು ನೋಡಿ, ನನ್ನ ಮನಸ್ಸಿಗೆ ಅತಿಶಯ ಸಂತೋಷವಾಗಿದೆ.

ಶ್ರೀಶಂಕರಾಚಾರ್ಯರು ತಾವು ಬರೆದ ಐತರೇಯೋಪನಿಷದ್ಭಾಷ್ಯದ ಉಪೋದ್ಘಾತದಲ್ಲಿ ಹೀಗೆ ಹೇಳಿದ್ದಾರೆ:—"**ಪ್ರಾಗ್ಗಾರ್ಹಸ್ಥ್ಯ ಪ್ರತಿಪತ್ತೇಃಋಣಿತ್ವಾಸಂಭವಾತ್**" (ಎಂದರೆ, ಗೃಹಸ್ಥಾಶ್ರಮವನ್ನು ಸ್ವೀಕರಿಸುವುದಕ್ಕಿಂತ ಪೂರ್ವದಲ್ಲಿ ಪುರುಷನಿಗೆ ಋಣಿತ್ವವು ಸಂಭವಿಸುವುದಿಲ್ಲ.) ಇದರ ಗರ್ಭಿತಾರ್ಥವೇನೆಂದರೆ, ಗುರುಕುಲದಲ್ಲಿ ಸಂಪೂರ್ಣ ವಿದ್ಯಾಭ್ಯಾಸವನ್ನು ಮಾಡಿ, ಗುರುಕುಲದಿಂದ ಹೊರಗೆ ಬಂದಕೂಡಲೆ ಅರ್ಥಾತ್ ಗೃಹಸ್ಥಾಶ್ರಮವನ್ನು ಸ್ವೀಕರಿಸಿದಕೂಡಲೆ ಋಷಿಋಣ, ದೇವಋಣ, ಪಿತೃಋಣಗಳು ಪುರುಷನಿಗೆ ಪ್ರಾಪ್ತವಾಗುತ್ತವೆ. ಈ ದೃಷ್ಟಿಯಿಂದ ಶ್ರೀಯಾಜ್ಞವಲ್ಕ್ಯಮಹಾಮುನಿಗಳ ಚರಿತ್ರೆಯ ಅಭ್ಯಾಸವು ಸಂಪೂರ್ಣವಾದಕೂಡಲೆ ಈ ಚರಿತ್ರೆಯನ್ನು ಬರೆದು ಮುದ್ರಿಸಿ ಪ್ರಸಿದ್ಧಮಾಡುವುದು, ಋಷಿಯ ಋಣವನ್ನು ತೀರಿಸುವ ಉಪಾಯವಾಗಿರುವುದರಿಂದ ಈ ಕರ್ತವ್ಯವನ್ನು ನೆರವೇರಿಸಿ, ಋಷಿಋಣವನ್ನು ತೀರಿಸಿದ್ದರಿಂದ ನನ್ನ ಮನಸ್ಸಿಗೆ ಸಂತೋಷವಾಗುವುದು ಸ್ವಾಭಾವಿಕವಾಗಿದೆ.

ಶ್ರೀಯಾಜ್ಞವಲ್ಕ್ಯಮಹಾಮುನಿಗಳು ಕ್ರಿ. ಪೂ. ೩೦೦೦ ವರ್ಷಗಳ ಹಿಂದೆ ಎಂದರೆ ಇಂದಿಗೆ ೫ ಸಾವಿರ ವರ್ಷಗಳ ಹಿಂದೆ ಇದ್ದರೆಂದು ಆಧುನಿಕ ಇತಿಹಾಸ ಸಂಶೋಧಕರು ನಿರ್ಣಯಿಸಿದ್ದಾರೆ. ಆದರೆ ಶ್ರೀಯಾಜ್ಞವಲ್ಕ್ಯರು ಇಂಥ ಸಂವತ್ಸರದಲ್ಲಿ ಇಂಥ ಮಾಸದಲ್ಲಿ ಇಂಥ ಪಕ್ಷದಲ್ಲಿ ಇಂಥ ತಿಥಿಯಲ್ಲಿ ಜನ್ಮಹೊಂದಿದರೆಂದು ಹೇಳಲು ಬಲವತ್ತರವಾದ ಪ್ರಮಾಣವು ಇಲ್ಲದಿರುವುದರಿಂದ ಶ್ರೀಯಾಜ್ಞವಲ್ಕ್ಯರ ಜಯಂತಿತಿಥಿಯು ಜ್ಯೇಷ್ಠಶುದ್ಧ ದಶಮಿಯೆಂದಾಗಲಿ; ಕಾರ್ತಿಕಶುದ್ಧ ದಶಮಿಯೆಂದಾಗಲಿ; ಅಥವಾ ಫಾಲ್ಗುಣಶುದ್ಧ ಪಂಚಮಿಯೆಂದಾಗಲಿ ತಿಳಿಯುವುದು, ಸರ್ವಥೈವ ನಿರಾಧಾರವಾಗಿದೆ. ಅತಏವ ಅಸಾಧುವಾಗಿದೆ. ಆದುದರಿಂದ ಶ್ರೀಯಾಜ್ಞವಲ್ಕ್ಯರ ಜಯಂತ್ಯುತ್ಸವವನ್ನು ಈ ಮೂರರಲ್ಲಿ ಯಾವುದೊಂದು ತಿಥಿಯಲ್ಲಿ ಮಾಡದೆ, ಪ್ರತಿವರ್ಷ ಮಾಘಶುದ್ಧ ಸಪ್ತಮಿಯ ದಿವಸ ಎಂದರೆ ರಥಸಪ್ತಮಿಯದಿವಸ(ಭಗವಾನ್ ಸೂರ್ಯನಾರಾಯಣನ ರಥಾರೋಹಣದ ದಿವಸ) ಶ್ರೀಯಾಜ್ಞವಲ್ಕ್ಯರ ಸ್ಮೃತಿದಿನವೆಂದು ಈ ಮಹನೀಯರ ಉತ್ಸವವನ್ನು ಪಾಲಿಸುವುದು ಸಮಂಜಸವಾಗಿದೆ; ಏಕೆಂದರೆ, ಶ್ರೀಯಾಜ್ಞವಲ್ಕ್ಯರ ಗುರುಗಳಾದ ಶ್ರೀಸೂರ್ಯಋಷಿಗಳು ಭಗವಾನ್ ಸೂರ್ಯನ[1] ಅವತಾರರೆಂಬುದು ಪುರಾಣಪ್ರಸಿದ್ಧವಾಗಿದ್ದುದರಿಂದ ಭಗವಾನ್ ಸೂರ್ಯನ ರಥಾರೋಹಣದ ದಿವಸವೇ ಸೂರ್ಯಋಷಿಗಳ

---

೧ ಶಂಕರಂ ಶಂಕರಾಚಾರ್ಯಂ ।
ಕೇಶವಂ ಬಾದರಾಯಣಮ್ ॥
ಸೂತ್ರಭಾಷ್ಯಕೃತೌ ವನ್ದೇ ।
ಭಗವಂತೌ ಪುನಃ ಪುನಃ ॥

ಈ ಶ್ಲೋಕದಲ್ಲಿ " ಶಂಕರ " ಎಂಬ ಹೆಸರಿನಿಂದ ಇರುವ ದೇವತೆಯನ್ನೂ ಆ ದೇವತೆಯ ಅವತಾರರನ್ನೂ ಆ ಒಂದೇ ಹೆಸರಿನಿಂದ ಉಲ್ಲೇಖಿಸಿದಂತೆಯೇ ಸೂರ್ಯಋಷಿಯು ಸೂರ್ಯದೇವತೆಯ ಅವತಾರನಾಗಿದ್ದಾನೆಂಬುದು ಪುರಾಣಗಳಲ್ಲಿ ಉಕ್ತವಾಗಿದೆ.

ಹಾಗೂ ಇವರ ಶಿಷ್ಯರಾದ ಶ್ರೀಯಾಜ್ಞವಲ್ಕ್ಯಋಷಿಗಳ ಸ್ಮೃತಿದಿನದ ಉತ್ಸವವನ್ನು ಪಾಲಿಸುವುದು ಯಥೋಚಿತವಾಗಿದೆ.

ಮಹಾಪುರುಷರ ಜಯಂತಿತಿಥಿಯು ಪ್ರಾಯಶಃ ಅನಿರ್ಣೀತವಾಗಿರುವುದರಿಂದ ಮಹಾಪುರುಷರ ಜಯಂತಿತಿಥಿಯ ಬಗ್ಗೆ ಭಿನ್ನಾಭಿಪ್ರಾಯಗಳು ಕಾಣಬರುತ್ತವೆ. ಉದಾ:—ಶ್ರೀಮಧ್ವಾಚಾರ್ಯರ ಜಯಂತಿ ತಿಥಿಗಳು (೧) ಆಶ್ವೀನ ಶುದ್ಧ ೧೦ (೨) ಮಾಘಶುದ್ಧ ೭; ಶ್ರೀಶಂಕರಾಚಾರ್ಯರ ಜಯಂತಿತಿಥಿಗಳು (೧) ವೈಶಾಖಶು. ೫, (೨) ವೈಶಾಖಶು.೧೦.

ಮಹಾಜ್ಞಾನಿಗಳಾದ ಶ್ರೀಯಾಜ್ಞವಲ್ಕ್ಯಮಹರ್ಷಿಗಳ ಚರಿತ್ರೆಯ ಮುನ್ನುಡಿಯನ್ನು ಬರೆಯುವುದಕ್ಕೆ ಭಾರತೀಯ ತತ್ತ್ವಜ್ಞಾನದಲ್ಲಿ ನಿಷ್ಣಾತರಾದ ಶ್ರೀಮಾನ್ ಕುಲಕರ್ಣಿ ನಾರಾಯಣರಾಯರು ಪರಮ ಯೋಗ್ಯರಾದುದರಿಂದ ಇವರಿಂದಲೇ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಿಸಬೇಕೆಂದು ಸಂಕಲ್ಪಮಾಡಿದೆನು. ಅದೇ ಮೇರೆಗೆ ಈ ಗ್ರಂಥದ ಮುದ್ರಣಕಾರ್ಯವು ಮುಗಿದ ಕೂಡಲೇ ಈ ಚಿಕಿತ್ಸಕ ವಿದ್ವಾನ್ ಮಹಾಶಯರಾದ ನಾರಾಯಣರಾಯರಿಗೆ ಮುನ್ನುಡಿಯನ್ನು ಬರೆಯುವುದಕ್ಕೆ ಬಿನ್ನವಿಸಿದೆನು. ಆಗ ಇವರು ನನ್ನ ವಿನಂತಿಯನ್ನು ಮಾನ್ಯಮಾಡಿ, ಈ ಪುಸ್ತಕವನ್ನು ಓದಿ, ಮುನ್ನುಡಿಯನ್ನು ಬರೆದರು. ಇದಕ್ಕೋಸ್ಕರ ಈ ಮಹನೀಯರಿಗೆ ಕೃತಜ್ಞತಾಪೂರ್ವಕವಾದ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ತ್ರಿಕಾಂಡಮಂಡನಾಚಾರ್ಯರಾದ ವೇದಮೂರ್ತಿ ಬ್ರಹ್ಮಶ್ರೀಮಹಾದೇವ ದೀಕ್ಷಿತರು ದಂಡವತೆ ದಾರವಾಡ ಈ ಮಹಾನುಭಾವರು ತಮ್ಮ ವೈದಿಕಗ್ರಂಥಾಲಯದಲ್ಲಿರುವ ಗ್ರಂಥಗಳನ್ನು ಬೇಡಿದಾಕ್ಷಣವೇ ಕೊಟ್ಟು, ಚೆನ್ನಾಗಿ ಸಾಹಾಯ್ಯವನ್ನು ಮಾಡಿದರು. ಈ ಔದಾರ್ಯಕ್ಕೋಸ್ಕರ ಈ ಮಹಾಭಾಗರನ್ನು ಎಷ್ಟು ಹೊಗಳಿದರೂ ಸ್ವಲ್ಪವೇ ಸರಿ. ಇವರಿಗೆ ನನ್ನ ಅನಂತ ವಂದನೆಗಳನ್ನು ಸಮರ್ಪಿಸುತ್ತೇನೆ.

ಶ್ರೀಮತ್ಪೂಜ್ಯ ಚಿದಂಬರ ದೀಕ್ಷಿತರವರು ಬಡ್ನಿ. ಧಾರವಾಡ ಈ ಪುಣ್ಯಶ್ಲೋಕರು ತಮ್ಮ ವೈದಿಕ ಗ್ರಂಥಸಂಗ್ರಹವನ್ನೆಲ್ಲ ನನ್ನ ಈ ಲೇಖನ ಕಾರ್ಯಕ್ಕೆ ಅನುಕೂಲವಾಗುವಂತೆ ಕೊಟ್ಟು, ಸಾಹಾಯ್ಯವನ್ನು ಮಾಡಿದರು. ಇದಕ್ಕೋಸ್ಕರ ಈ ಮಹನೀಯರಿಗೆ ನನ್ನ ಅನಂತವಂದನೆಗಳನ್ನು ಸಮರ್ಪಿಸುತ್ತೇನೆ.

ಇದೇ ಮೇರೆಗೆ ಕುಂದಗೋಳ ಗ್ರಾಮದ ವೇದಮೂರ್ತಿ ಬ್ರಹ್ಮಶ್ರೀ ದಾತಾರ ಮುಕುಂದಶಾಸ್ತ್ರಿಗಳು ತಮ್ಮಲ್ಲಿದ್ದ ಗ್ರಂಥಗಳನ್ನು ನನಗೆ ಉದಾರ ಹೃದಯದಿಂದ ಕೊಟ್ಟು ಸಾಹಾಯ್ಯಮಾಡಿದರು. ಇದಕ್ಕೋಸ್ಕರ ಈ ಮಹಾಶಯರಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಇದೇ ರೀತಿಯಿಂದ ಡಾ. ಕಾಂತರಾವ ಕಮಲಾಪೂರ, ಶ್ರೀ. ದತ್ತಾತ್ರೇಯರಾವ ಬೇಂದ್ರೆ, ಶ್ರೀ. ರಾಮಭಾವು ಕರಂದೀಕರ, ಶ್ರೀ. ಅನಂತರಾವ ಕರಮರಕರ ಶ್ರೀ. ಶಾಮರಾವ ತಟ್ಟಿ ಪ್ರಭೃತಿಗಳು ತಮ್ಮಲ್ಲಿದ್ದ ಗ್ರಂಥಸಂಗ್ರಹವನ್ನು ಬೇಕಾದಾಗ ಸ್ವೀಕರಿಸುವಂತೆ ಸೌಕರ್ಯವನ್ನು ಮಾಡಿದ್ದಕ್ಕೋಸ್ಕರ ಈ ಮಹನೀಯರಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಜೀವನಾರ್ಥ ಹೋರಾಟದ ಗಡಿಬಿಡಿಯಲ್ಲಿ ಎಷ್ಟೇ ಆಸ್ಥಾಪೂರ್ವಕವಾಗಿ ಪ್ರೂಫನ್ನು ಓದಿ ತಿದ್ದಿದರೂ ನಮ್ಮ ಕಣ್ಣು ತಪ್ಪಿಸಿ, ಕೆಲವು ಮುದ್ರಣ ದೋಷಗಳು ಉಳಿದಿರುತ್ತವೆ. ಇದಕ್ಕೋಸ್ಕರ ಶುದ್ಧಿಪತ್ರವನ್ನು ಏರ್ಪಡಿಸಿದ್ದೇವೆ. ಈ ಶುದ್ಧಿಪತ್ರದ ಪ್ರಕಾರ ತಪ್ಪು ತಿದ್ದಿಕೊಂಡು ಓದಬೇಕೆಂದು ವಾಚಕ ಮಹಾಶಯರಿಗೆ ಬಿನ್ನವಿಸುತ್ತೇವೆ.

ಕಲಾಸಿಂಧು ಮುದ್ರಣಾಲಯದ ಒಡೆಯರಾದ ಶ್ರೀಮಾನ್ ಬೆಳಗಾಂವಿ ರಾಮಚಂದ್ರರಾಯರು ಬಿ. ಎ., ಸಂಪಾದಕರು "ಜಯ ಕರ್ನಾಟಕ'' ಧಾರವಾಡ ಇವರು ಈ ಪುಸ್ತಕವನ್ನು ಅಂದವಾಗಿ ಮುದ್ರಿ

ಸುವುದಕ್ಕೆ ಶ್ರಮವಹಿಸಿ, ನನಗೆ ತುಂಬಾ ಸಾಹಾಯ್ಯವನ್ನು ಮಾಡಿದ್ದಾರೆ. ಇದಕ್ಕೋಸ್ಕರ ಈ ಮಹನೀಯರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಶ್ರೀಮಾನ್ ಡಾ. ಸಖಾರಾಮಪಂತ ಉರ್ಫ ತಾತ್ಯಾಸಾಹೇಬ ದೇಸಾಯಿ ಹುಬ್ಬಳ್ಳಿ ಇವರು ತಮ್ಮ ಸ್ವರ್ಗೀಯ ಪ್ರಿಯಪುತ್ರನಾದ ಭೀಮರಾವ ಬಿ. ಎ. ಈ ಧೀರೋದಾತ್ತ ತರುಣ ಮೃಗನ ಸ್ಮಾರಕಾರ್ಥವಾಗಿ ಹತ್ತುರೂಪಾಯಿಗಳನ್ನು ಶ್ರೀಯಾಜ್ಞವಲ್ಕ್ಯಮಹಾಮುನಿಗಳ ಚರಿತ್ರೆಯ ಮುದ್ರಣಕಾರ್ಯಕ್ಕೆ ಸಮರ್ಪಿಸಿದರೆಂದು ತಿಳಿಸುವಾಗ,— ಎಮ್. ಎ. ಪರೀಕ್ಷೆಯ ಅಭ್ಯಾಸವನ್ನು ಮಾಡುತ್ತಿರುವಾಗ್ಗೆ ಒಮ್ಮಿಂದೊಮ್ಮೆ ವಿಷಮಜ್ವರದಿಂದ ಮರಣಹೊಂದಿದ ಈ ನಮ್ಮ ಪ್ರೇಮದ ತರುಣ ಮಿತ್ರನಾದ ಭೀಮರಾಯನು ಎದುರಿನಲ್ಲಿ ಬಂದು ನಿಂತಂತಾಗಿ, ನಮ್ಮ ಹೃದಯವು ದುಃಖದಿಂದ ತುಂಬಿಬಂದು, ದುಃಖಾಶ್ರುಗಳು ಉದುರುವುವು ! ಈಶ ಇಚ್ಛೆಗೆ ಉಪಾಯವಿಲ್ಲ.

ಶ್ರೀಮಾನ್ ಜಿ. ಎನ್. ವೆಂಕಟರಮಣಯ್ಯನವರು ಸಬ್‌ಪೋಷ್ಟ ಮಾಸ್ತರ ಹೆಬ್ಬಾಳ ( ಬೆಂಗಳೂರು ಸಿಟಿ ) ಇವರು, ಶ್ರೀಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆಯ ಪ್ರೀತ್ಯರ್ಥವಾಗಿ ಐದು ರೂಪಾಯಿಗಳನ್ನು ಉಚಿತವಾಗಿ ಸ್ವೀಕರಿಸಬೇಕೆಂದು ತಿಳಿಸಿ, ಕಳುಹಿಸಿಕೊಟ್ಟಿದ್ದಾರೆ. ಇದೇ ಮೇರೆಗೆ ಶ್ರೀ. ನಾಗೇಶರಾವ ಉರ್ಫ ತಮ್ಮಣ್ಣಾ ದೇಸಾಯಿ (ಹಾನಗಲ್ಲ), ಶ್ರೀ. ಗುಂಡೇರಾವ ದೇಶಪಾಂಡೆ (ಹಳ್ಳೂರು), ಶ್ರೀ. ಶ್ರೀನಿವಾಸರಾವ ದಾಬಡೆ ಡಿ. ಕೋರ್ಟ ಶಿರಸ್ತೇದಾರ (ವಿಜಾಪೂರ), ಶ್ರೀ. ನೀಲಕಂಠರಾವ ಜಹಾಗೀರದಾರ ( ಹಿರೇಮುರಾಳ ), ಶ್ರೀ. ಶೇಷಗಿರಿರಾವ ಸರಾಫ ವಕೀಲ (ಮುದ್ದೇಬಿಹಾಳ), ಶ್ರೀ. ಚಿದಂಬರರಾವ ಶಿವಪೂಜಿ (ದೇವಗಿರಿ)' ಶ್ರೀ. ಕೃಷ್ಣಾಚಾರ್ಯ ಹೊನ್ನತ್ತಿ (ಧಾರವಾಡ) ಪ್ರಭೃತಿಗಳು ಈ ಚರಿತ್ರೆಯ ಮುದ್ರಣಕಾರ್ಯಕ್ಕೆ ಉಚಿತವಾಗಿ ಸಾಹಾಯ್ಯವನ್ನು ಮಾಡಿದ್ದಾರೆ.

ಈ ಉಪಕಾರಕ್ಕೋಸ್ಕರ ಈ ಮಹನೀಯರೆಲ್ಲರಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ.

ಇದೇಪ್ರಕಾರ ಈ ಚರಿತ್ರೆಯ ಮುದ್ರಣಕಾರ್ಯಕ್ಕೆ ಕೈಗಡರೂಪ ದಿಂದ ಸಾಹಾಯ್ಯವನ್ನು ಮಾಡಿದ ಶ್ರೀವಿಶ್ವನಾಥ ದೀಕ್ಷಿತರವರು (ಗುರ್ಲಹೊಸೂರು), ಶ್ರೀ. ಡಿ. ಟಿ. ನರಗುಂದಕರ ರಿಟಾಯರ್ಡ ಪೋಲೀಸ ಇನಸ್ಪೆಕ್ಟರ (ಧಾರವಾಡ) ಶ್ರೀ. ಬಳವಂತರಾವ ಬೆಂಗಳೂರು, ವೈಶ್ಯ ಭೂಷಣ ಶ್ರೀ. ಆನೇಗುಂದಿ ಜೀವಪ್ಪನವರು (ನವಲಗುಂದ), ಶ್ರೀ. ಭೀಮ ರಾವ ಜಾಂಬಳೆ (ಹುಬ್ಬಳ್ಳಿ, ಸುದರ್ಶನ) ಶ್ರೀ. ಎನ್. ಎಮ್. ಕುಲಹಳ್ಳಿ ವಕೀಲರು, ಶ್ರೀ. ಎನ್. ಆರ್. ಕುಲಕರ್ಣಿ,ವಕೀಲರು (ಬೈಲಹೊಂಗಲ) ಶ್ರೀಶ್ರೀನಿವಾಸಶಾಸ್ತ್ರಿಗಳವರು (ಆನಂದನವನ) ಶ್ರೀ. ಹುಚ್ಚರಾವ ಬೆಂಗೇರಿ ಮಾಸ್ತರ (ಹಾವೇರಿ) ಶ್ರೀ. ಲಕ್ಷ್ಮಣರಾವ! ಮುತಾಲಿಕದೇಸಾಯಿ ವಕೀಲರು (ಧಾರವಾಡ) ಶ್ರೀ. ವ್ಹಿ. ಆರ್. ಮುಧೋಳಕರ ಮಾಸ್ತರ (ಧಾರವಾಡ) ಶ್ರೀ. ಕೆ. ಬಿ. ಜೋಶಿ ಮಾಸ್ತರ (ಕುಂದಗೋಳ) ಪ್ರಭೃತಿ ಮಹಾಶಯರಿಗೆ ಕೃತಜ್ಞತಾಪೂರ್ವಕವಾದ ಧನ್ಯವಾದಗಳನ್ನು ಸಮರ್ಪಿ ಸುತ್ತೇವೆ.

ಧಾರವಾಡ
ತಾ. ೧೦—೧೧—೧೯೩೯
ದೀಪಾವಳಿ
ಚಾಳುಕ್ಯ ವಿಕ್ರಮ ವರ್ಷದ
೮೬೪ನೆಯ ಪ್ರಮಾಥಿ

ತಮ್ಮ
**ನಾ. ಶ್ರೀ. ರಾಜಪುರೋಹಿತ**



# ಶುದ್ಧಿಪತ್ರ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
| --- | --- | --- | --- |
| ೩ | ೪ | ಪ್ರಥಕ್ಕಾಗಿ | ಪೃಥಕ್ಕಾಗಿ |
| ೫ | ೧೫ | ಯಜುರ್ವೇದಕೆ | ಯಜುರ್ವೇದಕ್ಕೆ |
| ೫ | ೧೬ | ಕಾಣ | ಕಾಣ್ವ |
| ೭ | ೯ | ಪ್ರಥಕ್ಕಾಗಿವೆ | ಪೃಥಕ್ಕಾಗಿವೆ |
| ೭ | ೧೧ | ಪ್ರಥಕ್ಕಾಗಿರದೆ | ಪೃಥಕ್ಕಾಗಿರದೆ |
| ೧೧ | ೫ | ಯಾಜ್ಞವಲ್ಯನು | ಯಾಜ್ಞವಲ್ಕ್ಯನು |
| ೧೪ | ೧೯ | ಪತ್ಯಕ್ಷಜ್ಞಾನ | ಪ್ರತ್ಯಕ್ಷಜ್ಞಾನ |
| ೧೮ | ೮ | ಕದುರೆ | ಕುದುರೆ |
| ೧೯ | ೧೮ | ಶ್ಲೊ. | ಶ್ಲೋ. |
| ೨೦ | ೬ | ಕೃಷ್ಣಜುರ್ವೇದ | ಕೃಷ್ಣಯಜುರ್ವೇದ |
| ೨೮ | ೧೫ | ಪೌಢ | ಪ್ರೌಢ |
| ೨೯ | ೧ | ವ್ಯಕಪಡಿಸಿದ | ವ್ಯಕ್ತಪಡಿಸಿದ |
| ೨೯ | ೧೭ | ಭೋಧಾರ್ಥ | ಬೋಧಾರ್ಥ |
| ೩೦ | ೨ | ಸಖಾವಬೋಧನ | ಸುಖಾವಬೋಧನ |
| ೩೧ | ೧ | ಯರ್ಜುರ್ವೇದ | ಯಜುರ್ವೇದ |
| ೩೨ | ೭ | ಯಾಜ್ಞಲ್ಕ್ಯರು | ಯಾಜ್ಞವಲ್ಕ್ಯರು |
| ೩೨ | ೨೦ | ಅಧ್ಯಾಯಬಲ್ಲಿ | ಅಧ್ಯಾಯದಲ್ಲಿ |
| ೭೬ | ೨೨ | ಪ್ಯಾಲೇಶ | ಪ್ಯಾಲೇಸ |
| ೭೮ | ೬ | ಗ್ರಂಥಪು | ಗ್ರಂಥವು |
| ೮೪ | ೧೨ | ಚರಿಸುತಿ | ಚರಿಸುತ್ತಿ |
| ೮೯ | ೨೧ | ಮಹಾಮುನಿಗದು | ಮಹಾಮುನಿಗಳೆಂದು |
| ೮೯ | ೨೨ | ಸ್ವಯಮೆವ | ಸ್ವಯಮೇವ |
| ೧೦೦ | ೧೩ | ಮೈತ್ರಾಣೀ | ಮೈತ್ರಾಯಣೀ |
| ೧೨೧ | ೧೯ | ಛಾಂನ್ದೋಗ್ಯಂ | ಛಾನ್ದೋಗ್ಯಂ |